# ಕುವೆಂಪು ನಾಟಕಗಳಲ್ಲಿ ವರ್ಣ - ವರ್ಗ ಸಂಘರ್ಷ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ


ಸಂಶೋಧನ ಅಭ್ಯರ್ಥಿ

**ಭಾಗ್ಯನಾರಾಯಣ**

ಮಾರ್ಗದರ್ಶಕ

**ಶಿವಾರೆಡ್ಡಿ ಕೆ.ಸಿ.**

**ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ**

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ



೨೦೦೭ - ೦೭

177

# ಕುವೆಂಪು ನಾಟಕಗಳಲ್ಲಿ ವರ್ಣ - ವರ್ಗ ಸಂಘರ್ಷ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ

ಸಂಶೋಧನ ಅಭ್ಯರ್ಥಿ

**ಭಾಗ್ಯನಾರಾಯಣ**



ಮಾರ್ಗದರ್ಶಕ

**ಶಿವಾರೆಡ್ಡಿ ಕೆ.ಸಿ.**

**ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ**

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

೨೦೦೬ - ೦೭

# ದೃಢೀಕರಣ ಪತ್ರ

**ಭಾಗ್ಯನಾರಾಯಣ** ಅವರು **ಕುವೆಂಪು ನಾಟಕಗಳಲ್ಲಿ ವರ್ಣ-ವರ್ಗ ಸಂಘರ್ಷ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 02-08-2002

ಸ್ಥಳ : ಕುಪ್ಪಳಿ

ಶಿವಾರೆಡ್ಡಿ ಕೆ.ಸಿ.

ಮುಖ್ಯಸ್ಥರು

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.



# ಪ್ರಮಾಣ ಪತ್ರ

**ಕುವೆಂಪು ನಾಟಕಗಳಲ್ಲಿ ವರ್ಣ - ವರ್ಗ ಸಂಘರ್ಷ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು **ಶಿವಾರೆಡ್ಡಿ.ಕೆ.ಸಿ.** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: ೧೬-೦೮-೨೦೦೨

(ಭಾಗ್ಯನಾರಾಯಣ)

ಜಿ.೩, ಶ್ರೀಲಕ್ಷ್ಮೀ ನಿಲಯ,

೨ನೇ ಮುಖ್ಯರಸ್ತೆ (ಕಾವೇರಿ ಬೇಕರಿ ಎದುರು),

ಮಂಜುನಾಥ ಬಡಾವಣೆ ವಿಸ್ತರಣೆ,

ಚಿಕ್ಕದೇವಸಂದ್ರ, ಕೆ.ಆರ್.ಪುರ,

ಬೆಂಗಳೂರು - ೫೬೦೦೩೬.

# ಪರಿವಿಡಿ



| | | | |
|---|---|---|---|
| ೧. | ಪ್ರಸ್ತಾವನೆ | - | ೦೫ |
| ೨. | ವರ್ಣ - ವರ್ಗ ವ್ಯವಸ್ಥೆಯ ವಿರುದ್ಧ ಧ್ವನಿ | - | ೧೪ |
| ೩. | ಪುರೋಹಿತಶಾಹಿ ಹುನ್ನಾರಗಳ ಅನಾವರಣ | - | ೩೧ |
| ೪. | ಸಮಕಾಲೀನ ಸಮಸ್ಯೆಗಳೊಂದಿಗೆ ಮುಖಾಮುಖಿ | - | ೪೯ |
| ೫. | ಉಪಸಂಹಾರ | - | ೬೮ |
| ೬. | ಅನುಬಂಧ | - | ೭೩ |

# ಪ್ರಸ್ತಾವನೆ

ಭಾರತದ ಜನಾಂಗ ಜಗತ್ತಿನ ಅತಿ ಗೌರವಾನ್ವಿತ ಜನಾಂಗಳಲ್ಲಿ ಒಂದು ಅತಿ ಪುರಾತನ ಸಂಸ್ಕೃತಿಯನ್ನು ಹೊಂದಿರುವ ನಾವು ಸುಸಂಸ್ಕೃತರು, ಅಹಿಂಸಾ ಪ್ರತಿಪಾದಕರೆಂದು ಜಗತ್ತಿನಾದ್ಯಂತ ಪ್ರಚಲಿತವಾಗಿದ್ದೇವೆ. ಅದರಂತೆಯೆ ನಾವು ಬುದ್ಧ, ಗಾಂಧಿಯಂತಹ ಅಹಿಂಸಾ ಪ್ರತಿಪಾದಕರನ್ನೂ, ವಿವೇಕಾನಂದ, ಪರಮಹಂಸರಂತಹ ತತ್ವಜ್ಞಾನಿಗಳನ್ನೂ ಕಂಡಿದ್ದೇವೆ. ಕರ್ನಾಟಕದಲ್ಲಿ ಬಸವಣ್ಣನಂತಹ ಸಮಾಜ ಸುಧಾರಣವಾದಿ ಜಗತ್ತಿಗೇ ಮಾದರಿ. ಆದರೆ ಎಲ್ಲ ಹೆಗ್ಗಳಿಕೆಗಳ ಮರೆಯಲ್ಲಿ ಮಾತ್ರ ಒಂದು ದೊಡ್ಡ ದುರಂತಮಯ ಕರಾಳ ಸತ್ಯವೊಂದು ಅಡಗಿದೆ. ಅದೆಂದರೆ ನಮ್ಮಲ್ಲಿರುವ ''ಜಾತಿ ಪದ್ಧತಿ'' ಎಂಬ ಕ್ರೂರ, ಅಮಾನವೀಯ ಆಚರಣೆ. ಜಗತ್ತಿಗೆಲ್ಲಾ ಭಾತೃತ್ವ ಬೋಧಿಸುವ ಇದೇ ಜನ ತಮ್ಮ ಸಹಜೀವಿಗಳ ಒಂದು ವರ್ಗವನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ನಡೆಸಿಕೊಳ್ಳುತ್ತಾರೆ. ಅವರಿಗೆ ಅಸ್ಪೃಶ್ಯತೆಯ ಪಟ್ಟ ಕಟ್ಟಿ ನಿರಂತರ ಶೋಷಣೆಗೆ ಒಳಪಡಿಸುತ್ತಾರೆ.

''ನಾವು ಯಾವಾಗಲೂ ದೇವರನ್ನು ನಂಬುವ ಜನಾಂಗವಾಗಿದ್ದೇವೆ. ಮಾನವ ವ್ಯವಹಾರಗಳನ್ನು ದೈವ ನಿರ್ದೇಶಿಸುತ್ತದೆಂದೂ, ಕರ್ಮ ತತ್ವಕ್ಕೆ ಅನುಗುಣವಾಗಿ ಪ್ರತಿಯೊಂದು ಜನಾಂಗವನ್ನು ಅದರ ಯೋಗ್ಯತೆ ಮತ್ತು ಹಿಂದಿನ ಕರ್ಮಕ್ಕೆ ತಕ್ಕಂತೆ ದೇವರು ನಡೆಸುತ್ತಾನೆಂದೂ ನಂಬುವುದು ನಮ್ಮ ಧರ್ಮದ ಒಂದು ಪ್ರಮುಖ ಸಿದ್ಧಾಂತವಾಗಿದೆ''[೧] ಇದೇ ಕರ್ಮತತ್ವದ ಆಧಾರದ ಮೇಲೆ ಜನಾಂಗವನ್ನು ನಾಲ್ಕು ವರ್ಣಗಳಲ್ಲಿ ವಿಂಗಡಿಸಲಾಯಿತು.

ಅವುಗಳೆಂದರೆ;

೧. ಬ್ರಾಹ್ಮಣ

೨. ಕ್ಷತ್ರಿಯ

೩. ವೈಶ್ಯ

೪. ಶೂದ್ರ

ಈ ವಿಂಗಡಣೆಯನ್ನು ಸಮರ್ಥಿಸಲು ''ಮನುಸ್ಮೃತಿ'' ಎಂಬ ಕೃತಿಯನ್ನು ಉಲ್ಲೇಖಿಸಲಾಯಿತು. ಇವೆಲ್ಲಕ್ಕೂ ಕಾರಣ ಪುರೋಹಿತ ವರ್ಗ. ತಮ್ಮ ವರ್ಗವನ್ನು ಅತಿ ಶ್ರೇಷ್ಠ ವರ್ಗವೆಂದು ಬಿಂಬಿಸಲು ಅವರು ಹುಸಿ ಪುರಾಣಗಳನ್ನು ಬರೆದರು. ವೇದಗಳನ್ನು ತಿರುಚಿಯೋ ಪ್ರಕ್ಷಿಪ್ತಗಳನ್ನು ಸೇರಿಸಿಯೋ ಅವರ ಅನುಕೂಲಗಳಿಗೆ ಅನುಗುಣವಾಗಿ ಅವುಗಳನ್ನು ಬದಲಾಯಿಸಿದರು ಮತ್ತು ವ್ಯಾಖ್ಯಾನಿಸಿದರು. ಅವರ ಕುತಂತ್ರಗಳು ಕಾಲಕ್ರಮೇಣದಲ್ಲಿ ಸಾಮಾನ್ಯರ ಮನಸ್ಸಿನಲ್ಲಿ ಸತ್ಯಗಳಾಗಿ ಮೂಡಿ ಸ್ಥಾಪಿತವಾದವು.

''ಮನುಸ್ಮೃತಿ'' ಒಂದು ಸ್ವಜನ ಪಕ್ಷಪಾತದ, ದುರುದ್ದೇಶದ, ಮನುಕುಲ ವಿರೋಧಿ

ನೀತಿಗಳನ್ನು ಹೊಂದಿರುವ ಕೃತಿ. ಅದು ಅಸ್ಪೃಶ್ಯತೆಯನ್ನು ಧರ್ಮದ ಮುಖ್ಯ ಆಚರಣೆಯಾಗಿ ಬಿಂಬಿಸಿತು. ಅಸ್ಪೃಶ್ಯ ಜಾತಿಗಳಲ್ಲಿ ಹುಟ್ಟಿದವರನ್ನು ನಾಯಿಗಿಂತಲೂ ಕೀಳಾಗಿ ನೋಡಲಾಯಿತು. ಅದರ ಒಂದು ಉದಾಹರಣೆಯಾಗಿ ಈ ಶ್ಲೋಕವನ್ನು ಗಮನಿಸಬಹುದು.

*"ಘಾಣೇನ ಸೂಕರೋ ಹಂತಿ ಪಕ್ಷವಾತೇನ ಕುಕ್ಕುಟಃ!*

*ಶ್ವಾತು ದೃಷ್ಟಿನಿಪತೇನ ಸ್ಪರ್ಶೇನಾವರವರ್ಣಜ:*

*(ಅಧ್ಯಾಯ-೩ ಶ್ಲೋಕ-೨೪೧)*

*-ಹಂದಿ ಮೂಸಿದರೆ, ಕೋಳಿ ರೆಕ್ಕೆಗಾಳಿ ಬೀಸಿದರೆ,*

*ನಾಯಿ ನೋಡಿದರೆ, ಶೂದ್ರ ಮುಟ್ಟಿದರೆ, ಕರ್ಮವು*

*ಫಲಶಕ್ತಿಯನ್ನು ಕಳೆದುಕೊಳ್ಳುವುದು."*[೨]

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶೂದ್ರರೊಂದಿಗೆ ಸಮೀಕರಿಸಲಾಗಿರುವ ಪ್ರಾಣಿಗಳನ್ನು, ಹಂದಿ, ಕೋಳಿ, ನಾಯಿ ಈ ಮೂರು ಪ್ರಾಣಿಗಳು ಮನುಷ್ಯನ ಮಲವನ್ನು ತಿನ್ನುವ ಪ್ರಾಣಿಗಳು ಅವುಗಳಷ್ಟೇ ನೀಚ ಈ ಶೂದ್ರ ಎಂಬುದು ಈ ಶ್ಲೋಕದ ಅಭಿಪ್ರಾಯ.

ಇಂತಹ ಸಾವಿರಾರು ಅಮಾನವೀಯ ಸಿದ್ಧಾಂತಗಳಿಂದ ಕೂಡಿರುವ ಗ್ರಂಥವಾದ 'ಮನುಸ್ಮೃತಿ'ಯನ್ನು ಹಿಂದೂ ಧರ್ಮದ ಪ್ರಮುಖ ಗ್ರಂಥವಾಗಿ ಸ್ವೀಕರಿಸುವ ಮೂಲಕ ಪುರೋಹಿತರು ತಮ್ಮ ಪಾರಮ್ಯವನ್ನು ಸಾಧಿಸಲು ಎಂತಹ ಶಾಸ್ತ್ರಗಳನ್ನು ರೂಪಿಸುತ್ತ ಹೊರಟರೆಂಬುದು ತಿಳಿದು ಬರುತ್ತದೆ. ಇಂತಹ ಕುತಂತ್ರಗಳಿಂದ ಇಡೀ ಹಿಂದೂ ಸಮಾಜದ ಮೇಲೆ ಪುರೋಹಿತರು ಹಿಡಿತ ಸಾಧಿಸಿದರು. ಅವರ ಸೂಚನೆಗಳಂತೆಯೇ ಪ್ರತಿಯೊಂದು ಸಿದ್ಧಾಂತ ರೂಪುಗೊಂಡಿತು.

"ಹಿಂದೂಗಳ ಬಗ್ಗೆ ಹೇಳುವುದಾದರೆ ಶತಮಾನಗಳಿಂದ ಅನುವಂಶೀಯ ಶೋಷಕರ ಒಂದು ಸಣ್ಣ ಗುಂಪಿನ ವಶದಲ್ಲಿ ಎಲ್ಲಾ ಅಧಿಕಾರವೂ ಉಳಿದುಕೊಂಡು ಬಂದಿದೆ. ಅವರ ಜೀವನ ಮತ್ತು ಆಸಕ್ತಿಗಳು ಇವತ್ತಿಗೂ ಕೂಡ ಭಾರತದ ಜನಸಾಮಾನ್ಯರ ಹಿತಕ್ಕೆ ವಿರೋಧಿಯಾಗಿಯೆ ಇವೆ. ಹಿಂದೂಗಳ ಪ್ರಧಾನ ರಾಷ್ಟ್ರೀಯ ಸಂಸ್ಥೆಗಳಾದ ಧಾರ್ಮಿಕ ಸಾಹಿತ್ಯ, ಸಾಮಾಜಿಕ ಸಂಘಟನೆಗಳು ಮತ್ತು ಸರ್ಕಾರ ಹುಟ್ಟಿ ಬೆಳೆದು ಬಳಕೆಯಾದದ್ದು, ಇಂದಿಗೂ ಬಳಕೆಯಾಗುತ್ತಿರುವುದು ಅಜ್ಞಾನಿಗಳೂ ಗುಲಾಮರೂ ಒಗ್ಗಟ್ಟಿಲ್ಲದವರೂ ಆದ ಜನ ಸಾಮಾನ್ಯರನ್ನು ಪ್ರತಿಷ್ಠಿತ ವರ್ಗಗಳ ಶೋಷಣೆಗಾಗಿ ಇಟ್ಟುಕೊಳ್ಳುವ ಪ್ರಧಾನೋದ್ದೇಶದಿಂದಲೆ ಆಗಿದೆ.

ಈ ಶೋಷಕರು ಮತ್ತು ಅವರ ನಾಗರೀಕತೆಯನ್ನು ಸೂಚಿಸಲು ಚರಿತ್ರಕಾರರು ಉಪಯೋಗಿಸಿರುವ ಹೆಸರು ಬ್ರಾಹ್ಮಣಧರ್ಮ. ಜಾತಿ, ಪೌರೋಹಿತ್ಯ ಮತ್ತು ಹುಸಿತತ್ವದ ಆಧಾರದ ಮೇಲೆ ಹಿಂದೂಗಳನ್ನು ದಮನ ಮಾಡಿ ಶೋಷಿಸುವ ಸಮಾಜೋ ಧಾರ್ಮಿಕ ಅವ್ಯವಸ್ಥೆಯೆಂದು ಅದನ್ನು ವ್ಯಾಖ್ಯಾನಿಸಬಹುದು. ಜಾತಿ

ದಮನಕಾರಿ ತಂತ್ರಕ್ಕೆ ಪ್ರತಿನಿಧಿಯಾಗಿದೆ, ಪೌರೋಹಿತ್ಯ ಶೋಷಣೆಯ ಸಾಧನವಾಗಿದೆ; ಹುಸಿತತ್ವ ಇವೆರಡರ ಸಮರ್ಥನೆಯಾಗಿದೆ.''[೩]

ಆದರೆ ಇದೇ ಹಿಂದೂ ಧರ್ಮದ ಸಾಮಾನ್ಯ ಸಂಸ್ಕೃತಿಯಾಯಿತು. ಇದು ಕಾಲ ಕ್ರಮೇಣದಲ್ಲಿ ಸಾಮಾನ್ಯ ಸಂಸ್ಕೃತಿಯಾಗಲು ಮುಖ್ಯ ಕಾರಣವನ್ನು ಲೋಹಿಯಾ ಅವರು ಈ ರೀತಿ ಗುರುತಿಸುತ್ತಾರೆ. ''.....ಜಾತಿಯಿಂದ ಸಂಕಟ ಪಡುತ್ತಿರುವವರಿಗೂ ಅದು ಸ್ವೀಕಾರಾರ್ಹವಾಗುವ ಹಾಗೆ ಮಾಡಿ ಅದರ ನಿರ್ದಯತ್ವವನ್ನೂ ಭೂಗತಗೊಳಿಸಿ, ಗುಪ್ತವಾದ, ಆದರೆ ವ್ಯಾಪಕವಾದ ಒಂದು ಅಂಟುರೋಗವನ್ನು ಹರಡುವ ಕೀಟವನ್ನಾಗಿ ಅದನ್ನು ಇಲ್ಲಿ ಮಾಡಲಾಗಿದೆ.''[೪]

ಆದರೆ ಭಾರತೀಯರೆಲ್ಲರೂ ಪಾಲಿಸುತ್ತಿರುವ ಧರ್ಮ ಮತ್ತು ಧಾರ್ಮಿಕ ಸಿದ್ಧಾಂತಗಳು ಎಲ್ಲರಿಗೂ ಸೇರಿದ್ದೇ ಅಲ್ಲ. ಅದು ಕೇವಲ ಪುರೋಹಿತರ ಧರ್ಮ. ಅವರು ಪೋಷಿಸಿಕೊಂಡು ಬಂದ ಧರ್ಮ. ಮಧ್ಯ ಏಷ್ಯಾದಿಂದ ಬಂದ ಆರ್ಯರು ಭಾರತವೆಲ್ಲೆಡೆ ವ್ಯಾಪಿಸಿ ಸ್ಥಳೀಯರನ್ನು ಶೋಷಿಸಲು ಕಂಡುಕೊಂಡ ಧರ್ಮ. ''ಭಾರತೀಯ ಪ್ರಜೆಗಳು ತಮ್ಮ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡಾಗ ಅವರು ಬ್ರಾಹ್ಮಣ ಧರ್ಮವನ್ನೇ ತಮ್ಮ ಧರ್ಮ ಮತ್ತು ಸಂಸ್ಕೃತಿ ಎಂದು ಒಪ್ಪಿಕೊಂಡು ಅದರ ಅನ್ಯಾಯಗಳಿಗೂ ಅಸತ್ಯಗಳಿಗೂ ತುಳಿತಗಳಿಗೂ ಒಳಗಾಗಬೇಕಾಯಿತು.''[೫]

ಈ ಅನಿಷ್ಟ ವ್ಯವಸ್ಥೆಯ ವಿರುದ್ಧ ನಿರಂತರವಾಗಿ ಧ್ವನಿ ಕೇಳಿ ಬರುತ್ತಲೇ ಇತ್ತು. ಆದರೆ ಪ್ರತಿಭಾರಿಯೂ ಅದನ್ನು ಪುರೋಹಿತ ವರ್ಗ ತಮ್ಮ ಕುತಂತ್ರಗಳ ಮೂಲಕ ಹುಡುಗಿಸುತ್ತಲೇ ಬಂತು, ಅವರ ವಿರುದ್ಧ ಕೇಳಿ ಬಂದ ರಾಷ್ಟ್ರಮಟ್ಟದ ದೊಡ್ಡ ಧ್ವನಿ ಎಂದರೆ ಬುದ್ಧನದು. ಅವನು ಈ ಅನಿಷ್ಟಗಳನ್ನೆಲ್ಲಾ ತೊಲಗಿಸಲು ಮುಂದಾದನು. ಆರಂಭದಲ್ಲಿ ಯಶಸ್ವಿಯೂ ಆದನು. ಆದರೆ ಈ ದೊಡ್ಡ ಬಂಡಾಯವನ್ನು ಹುಡುಗಿಸುವಲ್ಲಿ ಬ್ರಾಹ್ಮಣ ವರ್ಗ ಯಶಸ್ವಿಯಾಯಿತು. ಇಡೀ ದೇಶವನ್ನು ವ್ಯಾಪಿಸಿದ್ದ ಬೌದ್ಧ ಧರ್ಮವನ್ನು ತಮ್ಮ ದಮನಕಾರಿ ನೀತಿಗಳಿಂದ ಬ್ರಾಹ್ಮಣರು ಹತ್ತಿಕ್ಕಿದರು. ಅದೇ ರೀತಿ ಕರ್ನಾಟಕದಲ್ಲಿ ಬಸವಣ್ಣ ಈ ಗೊಡ್ಡು ಸಿದ್ಧಾಂತಗಳ ಬಗ್ಗೆ ದೊಡ್ಡ ಚಳುವಳಿಯನ್ನು ಹೂಡುತ್ತಾನೆ. ಆದರೆ ಅದು ಉಚ್ಛ್ರಾಯ ತಲುಪುವ ಮೊದಲೇ ಅದನ್ನು ಹತ್ತಿಕ್ಕುವಲ್ಲಿ ಬ್ರಾಹ್ಮಣ ವರ್ಗ ಸಫಲವಾಯಿತು. ಇದೇ ರೀತಿ ಬ್ರಾಹ್ಮಣ ವರ್ಗದ ವಿರುದ್ಧ ನಿರಂತವರನ್ನೆಲ್ಲಾ ನಿರ್ನಾಮ ಮಾಡಲಾಯಿತು.

ತಮ್ಮ ಪಾರಮ್ಯವನ್ನು ನಿರಂತರವಾಗಿ ಕಾಯ್ದುಕೊಳ್ಳಲು ಪುರೋಹಿತ ವರ್ಗ ಗೊಡ್ಡು ಸಂಪ್ರದಾಯಗಳನ್ನು, ಅನಿಷ್ಟ ಪದ್ಧತಿಗಳನ್ನು, ಅಮಾನವೀಯ ಶಾಸ್ತ್ರಗಳನ್ನು, ಸುಳ್ಳು ಪುರಾಣಗಳನ್ನು ಸೃಷ್ಟಿಸಿ ಜನರಲ್ಲಿ ತಮ್ಮ ಮತ್ತು ತಮ್ಮ ಧರ್ಮದ ಬಗ್ಗೆ ಭಯ ನಿರಂತರವಾಗಿ ಉಳಿಯುವಂತೆ ಮಾಡಿದರು. ಇದರ ಪ್ರತಿಪಾದನೆಗೆ ಗುಡಿಗಳನ್ನು ನಿರ್ಮಿಸಿದರು ದೇವರುಗಳ ಸಾಲನ್ನೇ ಸೃಷ್ಟಿ ಮಾಡಿದರು. ಸ್ವರ್ಗ ನರಕಗಳ ಪರಿಕಲ್ಪನೆಯನ್ನು ಪ್ರಚುರಪಡಿಸಿ ಇಡೀ ಜನಾಂಗ ತಮ್ಮ ಧರ್ಮದ ಅಡಿಯಲ್ಲಿ ಸಿಲುಕುವಂತೆ ಮಾಡಿದರು.

ಪುರೋಹಿತ ವರ್ಗದ ವಿರುದ್ಧ ನಿರಂತರವಾಗಿ ಪ್ರತಿಭಟಿಸುತ್ತಲೇ ಬಂದಿರುವ ಒಂದು ಅಂಗವೆಂದರೆ ಸಾಹಿತ್ಯ. ಅದರಲ್ಲೂ ಕನ್ನಡ ಸಾಹಿತ್ಯ ಆದಿಯಿಂದಲೂ ಈ ಪುರೋಹಿತ ಕುಕೃತ್ಯಗಳ ವಿರುದ್ಧ ತನ್ನ ಅಸಮಾಧಾನವನ್ನು ವ್ಯಕ್ತಪಡಿಸುತ್ತಲೇ ಬಂದಿದೆ. ತೇಜಸ್ವಿ ಹೇಳುವಂತೆ ಕನ್ನಡ ಸಾಹಿತ್ಯ ಚರಿತ್ರೆಯೇ ಒಂದು ಚಳುವಳಿಯ ಚರಿತ್ರೆ. ಅದೇ ಚಳುವಳಿಯ ಒಂದು ಘಟ್ಟವೇ ಕುವೆಂಪು. ಕನ್ನಡ ಸಾಹಿತ್ಯದ ಹೊಸಯುಗದ ಪ್ರಮುಖ ಲೇಖಕ ಕುವೆಂಪು. ಅವರು ಸ್ವತ: ಶೂದ್ರರಾಗಿ ಜನಿಸಿದ ಕಾರಣ ಬ್ರಾಹ್ಮಣರ ಎಲ್ಲ ಶೋಷಣೆ, ಅವಮಾನಗಳನ್ನು ಸ್ವತ: ಅನುಭವಿಸಬೇಕಾಯಿತು. ಅದೇ ಅವರನ್ನು ಈ ಎಲ್ಲದರ ವಿರುದ್ಧ ಉಗ್ರ ಹೋರಾಟಕ್ಕೆ ಪ್ರಚೋದಿಸಿತು. ಅವರೇ ಹೇಳುವಂತೆ "ಜಾತಿ ಮತಗಳ ಬಗೆಗಿನ ವಿರೋಧ ಭಾವನೆ ನನ್ನ ಹುಟ್ಟುಗುಣ. ಸಂಸ್ಕಾರ ರೂಪದಲ್ಲಿಯೇ ಅದು ನನ್ನ ಜನ್ಮಕ್ಕಂಟಿಕೊಂಡು ಬಂದಿತೆಂದೇ ತೋರುತ್ತದೆ."[೬]

ಕುವೆಂಪು ತಮ್ಮ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಸಮರ್ಥವಾಗಿ ದುಡಿಸಿಕೊಂಡವರು. ಅಂತೆಯೇ ಅವರ ನಾಟಕಗಳು ಕೂಡ. ಕುವೆಂಪು ಒಟ್ಟು ಹದಿನಾಲ್ಕು ನಾಟಕಗಳನ್ನು ರಚಿಸಿದ್ದಾರೆ. ಅವುಗಳನ್ನು ಹೆಸರಿಸುವುದಾದರೆ,

೧. ಮೋಡಣ್ಣನ ತಮ್ಮ
೨. ಯಮನ ಸೋಲು
೩. ಜಲಗಾರ
೪. ನನ್ನ ಗೋಪಾಲ
೫. ಬಿರುಗಾಳಿ
೬. ಮಹಾರಾತ್ರಿ
೭. ಸ್ಮಶಾನ ಕುರುಕ್ಷೇತ್ರಂ
೮. ವಾಲ್ಮೀಕಿಯ ಭಾಗ್ಯ
೯. ರಕ್ತಾಕ್ಷಿ
೧೦. ಶೂದ್ರ ತಪಸ್ವಿ
೧೧. ಬೆರಳ್ ಗೆ ಕೊರಳ್
೧೨. ಬಲಿದಾನ
೧೩. ಕಾನೀನ
೧೪. ಚಂದ್ರಹಾಸ

ಇವುಗಳಲ್ಲಿ ಬಿರುಗಾಳಿ, ರಕ್ತಾಕ್ಷಿ ಮತ್ತು ಚಂದ್ರಹಾಸಗಳು ಮಾತ್ರ ಪೂರ್ಣಾವಧಿ ನಾಟಕಗಳು. ಉಳಿದೆಲ್ಲವೂ ಏಕಾಂಕಗಳು. ಕುವೆಂಪು ನಾಟಕ ರಚನೆಗೆ ತೊಡಗಿದ್ದು ೧೯೨೬ರಲ್ಲಿ. "....ಆಗಿನ್ನೂ ಕನ್ನಡ ನಾಟಕ ಕ್ಷೇತ್ರ ಅಷ್ಟಾಗಿ ಬೆಳವಣಿಗೆ ಹೊಂದಿರಲಿಲ್ಲ. ಒಂದೆಡೆ ವೃತ್ತಿ ರಂಗಭೂಮಿಗಾಗಿ ಮತ್ತು ಅರಮನೆಯ ರಂಗಪ್ರದರ್ಶನಕ್ಕಾಗಿ ಕನ್ನಡ ಬಯಲಾಟಗಳಿಂದ ಪ್ರೇರಣೆಗೊಂಡ ಹಾಗೂ ಸಂಸ್ಕೃತ ನಾಟಕಗಳಿಂದ ಅನುವಾದಗೊಂಡ ಪೌರಾಣಿಕ ವಸ್ತುವಾಧಾರಿತ ನಾಟಕಗಳು ಪ್ರಕಟಗೊಂಡರೆ, ಮತ್ತೊಂದೆಡೆ ಆಂಗ್ಲ ಸಾಹಿತ್ಯದ ಅಧ್ಯಯನ ಮಾಡಿದ ವಿದ್ವಾಂಸರಿಂದ ಗ್ರೀಕ್ ಮತ್ತು ಇಂಗ್ಲೀಷ್ ಭಾಷೆಯ ನಾಟಕಗಳು ಅನುವಾದ ಇಲ್ಲವೇ ರೂಪಾಂತರಗೊಂಡು ಪ್ರಕಟಗೊಳ್ಳುತ್ತಿದ್ದವು. ಆಗಾಗ ಅವುಗಳ ಪ್ರದರ್ಶನವೂ ನಡೆಯುತ್ತಿತ್ತು. ಇದೇ ಹೊತ್ತಿಗೆ ಬಿ.ಎಂ.ಶ್ರೀ ಅವರು ಗದಾಯುದ್ಧ ನಾಟಕಂ, ಅಶ್ವತ್ಥಾಮನ್ ಮತ್ತು ಪಾರಸೀಕರು ಎಂಬ ನಾಟಕಗಳನ್ನು ರಚಿಸಿ ಆಧುನಿಕ ಕನ್ನಡ ಸಾಹಿತ್ಯ ನಾಟಕಗಳಿಗೆ ನಾಂದಿ ಹಾಡಿದರು." [2]
~~Dz ÀÄ PÀPÀ ÀÄ À Á» vÀå Al PÀUÀ ÉÀÁ ° Ár z ÀÄ~~"

ಇಂತಹ ಸಂದರ್ಭದಲ್ಲಿ ಕುವೆಂಪು ನಾಟಕ ರಚನೆಗೆ ತೊಡಗಿದಾಗ, ದೇಶದ ಬೌದ್ಧಿಕ ವಲಯದಲ್ಲಿ ಎರಡು ಮುಖ್ಯ ಸವಾಲುಗಳಿದ್ದವು. ಅವೆಂದರೆ ಒಂದು ವಸಾಹಿತುಶಾಹಿಯ ವಿರುದ್ಧ ಜನರನ್ನು ಒಗ್ಗಟ್ಟಾಗಿಸುವುದು; ಮತ್ತೊಂದು ದೇಶದಲ್ಲಿ ಆತಂರಿಕವಾಗಿ ಕೊಳೆತು ನಾರುತ್ತಿದ್ದ ಸಮಸ್ಯೆಗಳಾದ ಜಾತಿ ಪದ್ಧತಿ, ಅಸ್ಪೃಶ್ಯತೆ, ಮೌಢ್ಯ, ಅಜ್ಞಾನಗಳ ವಿರುದ್ಧ ಜನರಲ್ಲಿ ಜಾಗೃತಿ ಮೂಡಿಸುವುದು. ಕುವೆಂಪು ಅವರು ಈ ಎರಡೂ ನೆಲೆಯಲ್ಲಿ ಸಾಹಿತ್ಯ ರಚನೆಗೆ ತೊಡಗಿದರು. ಅದರಲ್ಲೂ "ಹಿಂದೂ ಮತ ಮೌಢ್ಯಗಳ ಜೊತೆ ಕುವೆಂಪು ಅವರಷ್ಟು ಹೋರಾಡಿದ ಲೇಖಕರು ಯಾರೂ ಇಲ್ಲ." [೩]

ಅವರ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಈ ವಿಷಯವನ್ನು ಮನಗಾಣಬಹುದು. ಅವರ ಹದಿನಾಲ್ಕು ನಾಟಕಗಳ ಪೈಕಿ ಸಾಮಾಜಿಕ ವಿಶ್ಲೇಷಣೆಯ ಮುಖ್ಯ ಕೃತಿಗಳೆಂದರೆ ಜಲಗಾರ, ಶೂದ್ರತಪಸ್ವಿ ಮತ್ತು ಬೆರಳ್ ಗೆ ಕೊರಳ್. ಈ ಮೂರು ನಾಟಕಗಳು ವರ್ಣ, ವರ್ಗ ಸಂಘರ್ಷದ ನೆಲೆಯಲ್ಲಿ ಮೂಡಿಬಂದ ಬಹು ಮುಖ್ಯ ಕೃತಿಗಳು. ಅದರಲ್ಲೂ 'ಜಲಗಾರ' ನಾಟಕ ಕನ್ನಡ ಸಾಹಿತ್ಯದಲ್ಲಿ ಬಿರುಗಾಳಿ ಎಬ್ಬಿಸಿದ ಕೃತಿ. ಪುರೋಹಿತ ವರ್ಗದ ವಿರುದ್ಧ ಕುವೆಂಪು ನೇರವಾಗಿ ಸಂಘರ್ಷಕ್ಕಿಳಿಯುವ ಕೃತಿ ಜಲಗಾರ. "೧೯೨೮ರಲ್ಲಿ ಪ್ರಕಟವಾದ 'ಜಲಗಾರ' ನಾಟಕವು ಬಳಿಕದ ಅವರ ಶೂದ್ರತಪಸ್ವಿ, 'ಬೆರಳ್ ಗೆ ಕೊರಳ್' ನಾಟಕಗಳೊಂದಿಗೆ ಸಂಬಂಧ ಹೊಂದಿರುವುದಷ್ಟೇ ಅಲ್ಲದೆ, ಅವರ ಕಾದಂಬರಿಗಳು ಮತ್ತು ವಿಚಾರ ಸಾಹಿತ್ಯಗಳ ಜೊತೆಗೆ ಅಂತರಪಠ್ಯೀಯ ಸಬಂಧವನ್ನು ಹೊಂದಿದ." [೬]

'ಜಲಗಾರ' ನಾಟಕ ಮೂಡಿದ ಹಿನ್ನಲೆಯನ್ನು ಕುವೆಂಪು ಹೀಗೆ ವಿವರಿಸುತ್ತಾರೆ "....ಅಸ್ಪೃಶ್ಯತೆಯೊಂದು ಮಹಾ ಪಾಪವೆಂದು ಗಾಂಧೀಜಿ ಘೋಷಿಸಿದರಲ್ಲ ಆ ಘೋಷಣೆ ನನಗೆ ತುಂಬಾ ಹಿಡಿಸಿತು. ಆ ಸಂದರ್ಭದಲ್ಲಿ

ನಾನು ಜಲಗಾರ ರಚಿಸಿದ್ದು. ದೇವಾಲಯಗಳಿಗೆ ಪ್ರವೇಶಾವಕಾಶ ದೊರೆತರೂ ಹರಿಜನರು ಅಲ್ಲಿಗೆ ಹೋಗಬಾರದೆಂದೇ ನನ್ನ ಸಲಹೆ. ನೂರಾರು ದೇವತೆಗಳನ್ನು ಪೂಜಿಸಿಯೇ ನಮ್ಮ ದೇಶ ಈ ಸ್ಥಿತಿಗೆ ಬಂದದ್ದು. ಸವರ್ಣೀಯರ ದೇವರುಗಳನ್ನು, ಉತ್ತಮವರ್ಗದವರು ಸೃಷ್ಟಿಸಿರುವ ಪುರಾಣ ಪುಣ್ಯ ಕತೆಗಳನ್ನು, ಮೌಢ್ಯ ಸಂಪ್ರದಾಯಗಳನ್ನು ಅವರು ಪೂರ್ಣವಾಗಿ ತಿರಸ್ಕರಿಸಬೇಕು, ಈ ನನ್ನ ಮಾತು ಎಲ್ಲ ಶೂದ್ರರಿಗೂ ಅನ್ವಯಿಸುತ್ತದೆ."[೧೦]
~~CÉÀÄÄÉ'~~[೧೧] ಈ ಸಂದರ್ಶನದಲ್ಲಿ ಅವರ ದೇವಾಲಯಗಳ ಬಗೆಗಿನ ಅಭಿಪ್ರಾಯವೂ ಸ್ಪಷ್ಟವಾಗುತ್ತದೆ. ಪೂಜೆ ಮಂತ್ರಗಳ ಬಗೆಗೆ ಅವರಿಗೆ ಅಪಾರ ಅಸಮಾಧಾನವಿತ್ತು. ಅದನ್ನು ಅವರ ಕೃತಿಗಳಲ್ಲಿ ತೋರ್ಪಡಿಸುತ್ತಾರೆ ಕೂಡ. ಪೂಜೆಯನ್ನು ಅವರು 'ಜಲಗಾರ' ನಾಟಕದಲ್ಲಿ ಈ ರೀತಿ ಜರಿಯುತ್ತಾರೆ.

*"..... ಪೂಜೆಯೆಂಬುದೊ ಧರ್ಮಬುದ್ಧಿಯನು*
*ಜೋಗುಳದಿ ಮಲಗಿಸುವ ಕಾಳಮಂತ್ರವು ...."*[೧೨]

ಒಂದೆಡೆ ಆಂತರಿಕವಾಗಿ ಸಮಾಜದಲ್ಲಿ ಈ ರೀತಿಯ ಸಮಸ್ಯೆಗಳಾದರೆ ಬಾಹ್ಯದಲ್ಲಿ ಅಂದರೆ ದೇಶದಲ್ಲಿ ಗುಲಾಮಗಿರಿಯ ವಿರುದ್ಧ ಹೋರಾಟ ಏರುಗತಿಯಲ್ಲಿತ್ತು. ಬ್ರಿಟಿಷರಿಂದ ಬಿಡುಗಡೆ ಪಡೆಯಲು ಗಾಂಧೀಜಿಯವರ ನೇತೃತ್ವದಲ್ಲಿ ಇಡೀ ದೇಶವೇ ಹೋರಾಟದ ಹಾದಿಹಿಡಿಯಿತು. ಗುಲಾಮಗಿರಿ ಕಾರಣಕ್ಕೆ ಬ್ರಿಟಿಷರ ವಿರುದ್ಧ ಕುವೆಂಪು ಸಿಡಿದೆದ್ದರೂ, ಅವರ ಬರುವಿಕೆಯಿಂದಾದ ಲಾಭಗಳನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಬ್ರಿಟಿಷರ ಆಗಮನದಿಂದ ಶತಮಾನಗಳಿಂದ ಅಕ್ಷರ ವಂಚಿತರಾದ ಶೂದ್ರವರ್ಗ ಶಾಲೆಗಳ ಪ್ರವೇಶಾವಕಾಶ ಪಡೆಯಿತು. ಶೂದ್ರ ವರ್ಗ ಅಕ್ಷರ ಕಲಿತಿದ್ದರಿಂದಲೇ ಅವರು ಪುರೋಹಿತಶಾಹಿ ಹುನ್ನಾರಗಳನ್ನು ತಿಳಿಯುವಲ್ಲಿ ಯಶಸ್ವಿಯಾದರು. ಕುವೆಂಪು ಸಹ ಅಕ್ಷರ ಕಲಿಕೆಯಿಂದಲೇ ಈ ಮಟ್ಟದ ಸಾಧನೆಗೈಯ್ಯಲು ಸಾಧ್ಯವಾಯಿತು. ಇಲ್ಲವಾದರೆ ಅವರೇ ಹೇಳುವಂತೆ

"..... ಇಂಗ್ಲೀಷಿನವರು ಇಂಡಿಯಾಕ್ಕೆ ಬರದಿದ್ದರೆ ನಾನು ಕುಪ್ಪಳಿಯಲ್ಲಿ ಸಗಣಿ ತಟ್ಟಿಕೊಂಡು, ಬ್ರಾಹ್ಮಣರ ಗದ್ದೆ ಉತ್ತುಕೊಂಡಿರುತ್ತಿದ್ದೆ."[೧೩]

ಶಿಕ್ಷಣದ ಬೆಳಕು ದಮನಿತ ವರ್ಗಗಳಿಗೆ ವರದಾನವಾಯಿತು. ಭಾರತ ಗುಲಾಮಗಿರಿಗೊಳಗಾಗಲು ಪುರೋಹಿತಶಾಹಿಗಳೇ ಕಾರಣ ಎಂದು ಕುವೆಂಪು ದೃಢವಾಗಿ ನಂಬಿದ್ದರು.

"ಶಸ್ತ್ರಾಸ್ತ್ರ ಸಂಗ್ರಹವೆ ಬೇಡ, ಮಂತ್ರ ತಂತ್ರಗಳ ಮೂಲಕವೇ ಗುಜರಾತಿನ ಸೋಮನಾಥ ದೇವಾಲಯವನ್ನು ನಾಶಮಾಡಲು ಬಂದ ತುರುಕರನ್ನು ಗೆಲ್ಲುತ್ತೇವೆಂದು ಜಂಭ ಕೊಚ್ಚಿದವರು ಅವರು. ಗಾಂಧೀಯುಗದಂತೆ ಹಿಂದೆಯೂ ಸಾಮಾನ್ಯ ಜನ ಸಿಡಿದಿದ್ದರೆ ವಿದೇಶಿಯರ ಆಕ್ರಮಣಕ್ಕೆ ಅವಕಾಶವೇ ಇರುತ್ತಿರಲಿಲ್ಲ. ರಾಷ್ಟ್ರದ ಅನೈಕ್ಯಕ್ಕೆ ಕ್ರಿಶ್ಚಿಯನ್ ಮುಸ್ಲಿಂ ಧರ್ಮಗಳ ಪ್ರಸಾರಕ್ಕೆ ಅಸಮಾನತೆ ಶೋಷಣೆ ಗುಲಾಮತನವನ್ನು ಪೋಷಿಸುತ್ತಿದ್ದ ವರ್ಣವ್ಯವಸ್ಥೆ ಕಾರಣವಲ್ಲದೆ ಬೇರೆಯೇನೂ ಅಲ್ಲ. ಸಕಲ ಸಾಮಾಜಿಕ ರೋಗರುಜಿನಗಳಿಗೆ ಜಾತೀಯತೆ ಹಾಗೂ ಅಸ್ಪೃಶ್ಯತೆಯೇ ಮೂಲ ಕಾರಣವೆಂದು ಮತ್ತೊಮ್ಮೆ ಹೇಳಬೇಕಾಗಿಲ್ಲ."[೧೪]

ಈ ಎಲ್ಲಾ ಹಿನ್ನೆಲೆಯಲ್ಲಿ ಅವರ ನಾಟಕಗಳು ಮೂಡಿಬಂದಿವೆ. ಪುರೋಹಿತಶಾಹಿಯನ್ನು ಮುರಿಯಬೇಕೆಂದು ಅವರು ತಮ್ಮ ನಾಟಕಗಳಲ್ಲಿ ಪ್ರತಿಪಾದಿಸಿದ್ದಾರೆ.

## ವರ್ಣ - ವರ್ಗ

ಭಾರತದ ಮಟ್ಟಿಗೆ ವರ್ಣ ಮತ್ತು ವರ್ಗ ಎರಡೂ ಒಂದೇ ನಾಣ್ಯದ ಎರಡು ಮುಖಗಳಂತೆ ತೋರುತ್ತದೆ. ವರ್ಣವ್ಯವಸ್ಥೆಯ ಅತಿಮುಖ್ಯ ತಂತ್ರಗಳೆಂದರೆ ಸಮಾಜದ ಒಂದು ವರ್ಗವನ್ನು ವಿದ್ಯೆಯಿಂದ, ಸಾಮಾಜಿಕ ಹಕ್ಕುಗಳಿಂದ ದೂರಪಿರಿಸಿ ಅವರನ್ನು ಸಮಾಜದ ಮುಖ್ಯಧಾರೆಗೆ ಬರದಂತೆ ತಡೆಯೊಡ್ಡುವುದು. 'ಮನುಸ್ಮೃತಿ'ಯಂತಹ ಸ್ವಜನ ಪಕ್ಷಪಾತ ಕೃತಿಯ ಆಧಾರದ ಮೇಲೆ ಅಧಮರನ್ನು ಹಣ, ಆಸ್ತಿ ಗಳಿಕೆಗಳಿಂದ ದೂರೀಕರಿಸಿ ಅವರನ್ನು ಆರ್ಥಿಕವಾಗಿಯೂ ಶೋಷಣೆಗೆ ಒಳಪಡಿಸುವುದು. ಈ ಕಾರಣದಿಂದ ಭಾರತದಲ್ಲಿ ಜಾತಿ ವ್ಯವಸ್ಥೆಯಡಿಯಲ್ಲಿ ಶೋಷಣೆಗೆ ಒಳಗಾದ ವರ್ಗವೇ ವರ್ಗ ವ್ಯವಸ್ಥೆಯಲ್ಲೂ ಶೋಷಣೆಗೆ ಒಳಗಾಗಬೇಕಾಯಿತು. ಈ ಅಧ್ಯಯನದ ಎಲ್ಲ ಹಂತಗಳಲ್ಲೂ ವರ್ಣ ವರ್ಗ ಸಂಘರ್ಷವನ್ನು ಒಂದೇ ನೆಲೆಯಲ್ಲಿಟ್ಟು ನೋಡಲಾಗಿದೆ.

## ಅಧ್ಯಯನದ ಕ್ರಮ

ಈ ನನ್ನ ಅಧ್ಯಯನವನ್ನು ತೇಜಸ್ವಿ ಹೇಳಿರುವಂತೆ "ಕುವೆಂಪು ಹಿಂದೂ ಧರ್ಮವನ್ನು, ಜಾತಿ ಪದ್ಧತಿಯನ್ನು, ಸಂಪ್ರದಾಯಗಳನ್ನು ತಿರಸ್ಕರಿಸುವ ಸಂದರ್ಭದಲ್ಲೇ ನಾವು ನೋಡಿದರೆ ಅವರು ಪಾದಾರ್ಪಣೆ ಮಾಡಿದ ಕನ್ನಡ ಸಾಹಿತ್ಯದ ಪರಂಪರೆಯೊಂದು ನಮಗೆ ಹೊಳೆಯುತ್ತದೆ. ಅದೇ ಆರ್ಯ ಮತ್ತು ವೈಧಿಕ ಸಂಸತಿಯೊಂದರ ವಿರುದ್ಧ ಪ್ರತಿಭಟನೆ. ಪಂಪ, ರನ್ನ, ವೃತ್ತವಿಲಾಸ, ವಚನಕಾರರು, ಹರಿಹರ, ರಾಘವಾಂಕ, ಇವರೆಲ್ಲರ ಹಿಂದೆ ಸಾಹಿತ್ಯ ರಚನೆಗೆ ಕೆಲಸ ಮಾಡಿದ ವರ್ಣ ಸಂಘರ್ಷವೇ ಮತ್ತೆ ಚೈತನ್ಯ ಶಕ್ತಿಯಾಗಿ ಸಮಕಾಲೀನ ಸಾಹಿತ್ಯದಲ್ಲೂ ಕೆಲಸ ಮಾಡಿರುವುದನ್ನು ಕಾಣಬಹುದು. ಕನ್ನಡ ಸಾಹಿತ್ಯ ಚರಿತ್ರೆ ಎಂದರೆ ಅದೊಂದು ಮರುಕಳಿಸುವ ಬಂಡಾಯ ಚರಿತ್ರೆಯೇ ಆಗಿದೆ. ಆಲೋಚನೆ ಚಿಂತನೆ, ಕಾವ್ಯ ಸೃಷ್ಟಿ ಮುಂತಾದವುನ್ನೆಲ್ಲಾ ಪರಿಭಾಷೆಯಲ್ಲಿ ಕಾದಿರಿಸಿಕೊಂಡು ಮುಂದುವರಿಯುತ್ತಾ ಹೋದ ಆರ್ಯ ಸಂತತಿ ಒಂದು ಕಡೆ, ಭಾಷೆ ಬರವಣಿಗೆಗಳಿಂದ ವಂಚಿತರಾಗಿ ಶೂದ್ರರೆನಿಸಿಕೊಂಡು ಅನುಭವಗಳನ್ನು ಗುರುತ್ವಾಕರ್ಷಣದ ವರ್ತುಳದಲ್ಲಿ ಸಿಕ್ಕಿ ಚರಿತ್ರೆಯನ್ನು ನಿರ್ಮಿಸುತ್ತಾ ಹೋದ ಶೂದ್ರ ಸಮುದಾಯ ಒಂದು ಕಡೆ. ಇವೆರಡಕ್ಕೂ ನಡೆದ ತೊಯ್ದಾಟ ಹೊಯ್ದಾಟಗಳೇ ಕನ್ನಡ ಚರಿತ್ರೆಯ ನಡೆಯನ್ನು ಮುಂದೊತ್ತುತ್ತಾ ಹೋಯಿತು."[09] ಈ ನಿಟ್ಟಿನಲ್ಲಿ ಅಂದರೆ ಹೋರಾಟದ ಚರಿತ್ರೆಯಾಗಿ ಕುವೆಂಪು ನಾಟಕಗಳನ್ನು ನೋಡಲಾಗಿದೆ.

## ಅಧ್ಯಯನದ ವ್ಯಾಪ್ತಿ ಮತ್ತು ಮಿತಿ

ಇಲ್ಲಿ ಕೈಗೊಂಡಿರುವ ಅಧ್ಯಯನದಲ್ಲಿ ಪ್ರಮುಖವಾಗಿ ಕುವೆಂಪು ನಾಟಕಗಳಲ್ಲಿ ವರ್ಣ ಮತ್ತು ವರ್ಗ ಸಂಘರ್ಷಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಅವರ ಮೂರು ನಾಟಕಗಳಾದ ಜಲಗಾರ, ಶೂದ್ರತಪಸ್ವಿ ಮತ್ತು ಬೆರಳ್ ಗೆ ಕೊರಳ್ ನಾಟಕಗಳು ಬಹುಮುಖ್ಯವಾದವು. ಅಧ್ಯಯನದ ಅವಧಿ ಮತ್ತು ಪುಟಗಳ ಚೌಕಟ್ಟಿಗೆ ಅನುಗುಣವಾಗಿಯೂ ಈ ಮೂರು ನಾಟಕಗಳನ್ನು ಆಯ್ದುಕೊಳ್ಳಲಾಗಿದೆ.

## ಆಕರ ಕೃತಿಗಳು

೧. ಸ್ವಾಮಿ ಧರ್ಮತೀರ್ಥ : ೨೦೦೩(ಮೂರನೇ ಮುದ್ರಣ), ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಅನು:ಭಗವಾನ್, ಮಹಿಮ ಪ್ರಕಾಶನ ಮೈಸೂರು, ಪುಟ - ೨೩

೨. ಮನುಸ್ಮೃತಿ : ೧೯೯೪ (ಐದನೆಯ ಮುದ್ರಣ), ಅನು: ಚಕ್ರಕೋಡಿ ಈಶ್ವರ ಶಾಸ್ತ್ರೀ, ಸಮಾಜ ಪುಸ್ತಕಾಲಯ, ಧಾರವಾಡ, ಪುಟ - ೧೩೨

೩. ಸ್ವಾಮಿ ಧರ್ಮತೀರ್ಥ : ೨೦೦೩(ಮೂರನೇ ಮುದ್ರಣ), ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಅನು:ಭಗವಾನ್, ಮಹಿಮ ಪ್ರಕಾಶನ, ಮೈಸೂರು, ಪುಟ - ೨೫

೪. ರಾಮಮನೋಹರ ಲೋಹಿಯಾ : ೧೯೯೮, ಭಾಷೆ ಮತ್ತು ಇತಿಹಾಸ, ರಾಮಮನೋಹರ ಲೋಹಿಯಾ ಬರಹಗಳು ಸಂಪುಟ - ೩, ಸಂ : ನಟರಾಜ ಹುಳಿಯಾರ್, ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ - ೨೦೬.

೫. ಸ್ವಾಮಿ ಧರ್ಮತೀರ್ಥ : ೨೦೦೩(ಮೂರನೇ ಮುದ್ರಣ), ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಅನು:ಭಗವಾನ್, ಮಹಿಮ ಪ್ರಕಾಶನ, ಮೈಸೂರು, ಪುಟ - ೨೬

೬. ಕುವೆಂಪು : ೨೦೦೪, ಕುವೆಂಪು ಸಮಗ್ರ ಗದ್ಯ - ೨, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೯೪೨.

೭. ವೀರಣ್ಣ ರಾಜೂರ : ೨೦೦೫, ಅನಿಕೇತನ, ಸಂ. ಮರುಳಯ್ಯ ಸಾ.ಶಿ, ಸಪ್ನ ಬುಕ್ ಹೌಸ್, ಬೆಂಗಳೂರು, ಪುಟ - ೩೬೧

೮. ಮೊಗಳ್ಳಿ ಗಣೇಶ್:೨೦೦೬, ದಲಿತ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೫.

೯. ಶಿವಾರೆಡ್ಡಿ ಕೆ.ಸಿ. : ೨೦೦೪, ಕುವೆಂಪು ಸಮಗ್ರ ನಾಟಕ, ಸಂ. ಶಿವಾರೆಡ್ಡಿ ಕೆ.ಸಿ. , ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೨.

೧೦. ಕುವೆಂಪು : ೨೦೦೪, ಕುವೆಂಪು ಸಮಗ್ರ ಗದ್ಯ - ೨, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೯೪೨.

೧೧. ಕುವೆಂಪು : ೨೦೦೪, ಕುವೆಂಪು ಸಮಗ್ರ ನಾಟಕ, ಸಂ. ಶಿವಾರೆಡ್ಡಿ ಕೆ.ಸಿ. , ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೨.

೧೨. ಕುವೆಂಪು : ೨೦೦೪, - ಕುವೆಂಪು ಸಮಗ್ರ ಗದ್ಯ೨, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೮೫೪

೧೪. - ಅದೇ- ಪುಟ - ೮೬೩

## ಅಧ್ಯಾಯ - ೧

# ವರ್ಣ - ವರ್ಗ ವ್ಯವಸ್ಥೆಯ ವಿರುದ್ಧ ಧ್ವನಿ

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ವರ್ಣ ಮತ್ತು ವರ್ಗಗಳ ಪರಿಕಲ್ಪನೆಯನ್ನು ಒಂದೇ ನೆಲೆಯಲ್ಲಿಟ್ಟು ನೋಡಲಾಗಿದೆ. ಕರ್ಮದ ಆಧಾರದ ಮೇಲೆ ಜಾತಿಗಳನ್ನು ಸೃಷ್ಟಿಸಿ, ಅವುಗಳ ನಡುವೆ ಉಚ್ಚ ನೀಚ ಅಂತರಗಳನ್ನು ಸೃಷ್ಟಿಸುವ ಮೂಲಕ ಪುರೋಹಿತ ವರ್ಗ ಭಾರತೀಯ ಸಮಾಜ ಎಂದೂ ಸಾಮರಸ್ಯದಿಂದ ಕೂಡಿ ಬಾಳದಂತೆ ಮಾಡುವಲ್ಲಿ ಯಶಸ್ವಿಯಾಗಿದೆ. ಇದರಿಂದ ಸಮಾಜದಲ್ಲಿ ತಮ್ಮ ಜಾತಿಯ ಪಾರಮ್ಯಕ್ಕೆ ಎಂದೂ ಧಕ್ಕೆ ಬರದಂತೆ ಮಾಡುವಲ್ಲಿಯೂ ಅದು ಯಶಸ್ವಿಯಾಗಿದೆ. ಮನುಷ್ಯ ಮನುಷ್ಯನ ನಡುವೆ ಅಂತರ ಉಂಟು ಮಾಡುವ ಈ ವ್ಯವಸ್ಥೆಯ ವಿರುದ್ಧವೇ ಮೊದಲು ಕುವೆಂಪು ಬಂಡಾಯವೆದ್ದರು. ವರ್ಣ ವ್ಯವಸ್ಥೆಯ ವಿರುದ್ಧದ ಅವರ ಧ್ವನಿಗೆ ಮುಖ್ಯವಾದ ಮೂರು ನಿರ್ದಶನಗಳೆಂದರೆ ಜಲಗಾರ, ಶೂದ್ರತಪಸ್ವಿ ಮತ್ತು ಬೆರಳ್ ಗೆ ಕೊರಳ್ ನಾಟಕಗಳು. ಈ ನಾಟಕಗಳ ಪ್ರಮುಖ ಆಶಯ ವರ್ಣಾಶ್ರಮ ವ್ಯವಸ್ಥೆಯ ವಿರುದ್ಧ ಚಳುವಳಿ ಹೂಡುವುದೇ ಆಗಿತ್ತು. ಅವರ ಜಲಗಾರ, ಶಂಬೂಕ ಮತ್ತು ಏಕಲವ್ಯ ಪುರೋಹಿತಶಾಹಿಯ ಚೌಕಟ್ಟುಗಳನ್ನು ಮೀರುವ ತವಕದಲ್ಲಿದ್ದಾರೆ. ಜಲಗಾರ ತನ್ನ ಸುತ್ತ ಇರುವ ದೇವಾಲಯ, ಕಂದಾಚಾರ ಮುಂತಾದವುಗಳ ವಿರುದ್ಧ ದಂಗೆ ಎದ್ದಿದ್ದಾನೆ ಇನ್ನೊಂದೆಡೆ ಶಂಬೂಕ ಮತ್ತು ಏಕಲವ್ಯನಾಗಿರುವ ಬಚ್ಚ ಕೇವಲ ಪುರೋಹಿತ ವರ್ಗಕ್ಕೆ ಸೀಮಿತವಾಗಿದ್ದ ಭೌದ್ಧಿಕ ಕ್ಷೇತ್ರಕ್ಕೆ ಲಗ್ಗೆಯಿಟ್ಟಿದ್ದಾರೆ.

## ೧.೧ ಧರ್ಮದ ಕುರಿತ ಅಸಮಾಧಾನ

ಕುವೆಂಪು ಅವರಿಗೆ ಆಧ್ಯಾತ್ಮದ ಬಗ್ಗೆ ಅಪಾರ ಗೌರವವಾದರೂ ಧರ್ಮ ಮತ್ತು ಪೂಜೆ ಎಂಬ ಪರಿಕಲ್ಪನೆಗಳ ಬಗ್ಗೆ ಅಷ್ಟೇ ಕೋಪವೂ ಇದ್ದಿತು. 'ಜಲಗಾರ'ನಲ್ಲಿ ಮೂಡಿರುವಂತೆ

*"ಮೊದಲ ಠಕ್ಕನು ಮೊದಲ ಬೆಪ್ಪನಂ ಸಂಧಿಸಲು*
ಪ್ರಾರಂಭವಾಯಿತೆಂಬರ್ ಮತ ಎಂಬ ಮತಿ ವಿಕಾರಂ." [೧]
~~À¨À ¹vÉS jÃªÀvÀÄAS ªÀ«PÁgÀ."~~

*ಎಂದು ತರುಣನ ಮೂಲಕ ಹೇಳಿಸುತ್ತಾರೆ.* ಅಂತೆಯೆ ಮುಂದುವರಿದು;

*"ದೊರೆ ಪುರೋಹಿತರ್ ಅವಳಿ ಮೊಲೆಯೂಡಿ ಸಲಹಿದರದಂ.*

*ಮತದ ಮದಿರೆಯನೀಂಟಿ ಮಂಕುಬಡಿದಿದೆ ಜನಕೆ.*

*ಕೊನೆ ದೊರೆಯ ಕೊರಳಿಗಾ ಕೊನೆ ಪುರೋಹಿತನ ಕರುಳ್*

*ಉರುಳಾಗುವಾ ವರೆಗೆ ಸುಖವಿಲ್ಲ ಈ ಧರೆಗೆ!"* [೨]

ಮತವೆಂಬ ಮತಿ ವಿಕಾರಕ್ಕೆ ದೊರೆಗಳು ತಮ್ಮ ಸ್ವಾರ್ಥಕ್ಕೆ ಪುರೋಹಿತರ ಕುತಂತ್ರಗಳಿಗೆ ಮನ್ನಣೆ ನೀಡಿ ಬೆಳೆಸಿದರು. ಅದೇ ಈಗ ಉರುಳಾಗಿ ಎಲ್ಲರ ಬಲಿಯನ್ನು ಬಯಸುತ್ತಿದೆ. ಧರ್ಮದ ಪರಿಕಲ್ಪನೆಯೇ ಒಂದು ಕುತಂತ್ರವಾಗಿರುವಾಗ, ಅದರ ಸಾಂಸ್ಥಿಕ ಅಂಗವಾದ ಗುಡಿಗಳೂ ಪುರೋಹಿತಶಾಹಿಯ ತಂತ್ರಗಾರಿಕೆಯ ಯಂತ್ರಾಗಾರಗಳೇ ಸರಿ.

ಜಗತ್ತಿನ ಎಲ್ಲ ವಸ್ತುಗಳಿಗಿಂತಲೂ ಧರ್ಮವೇ ಪವಿತ್ರತಮವಾದುದು ಎಂಬ ಪುರೋಹಿತ ವರ್ಗದ ವಾದಕ್ಕೆ ಹೊಸ ವ್ಯಾಖ್ಯಾನವಾಗಿ ಈ ಮಾತುಗಳನ್ನು ಅರ್ಥೈಸಬಹುದು. ಸ್ವಾರ್ಥನಿರ್ಮಿತ ಪವಿತ್ರತಮ ಪರಿಕಲ್ಪನೆಯಾದ ಧರ್ಮಕ್ಕೆ ಪುರೋಹಿತವರ್ಗ ಜನ್ಮ ನೀಡಿತೇನೋ ಸರಿ, ಆದರೆ ಇದನ್ನು ಜಾರಿಗೊಳಿಸಲು ಮತ್ತು ಜನರಲ್ಲಿ ಬಲವಂತದಿಂದ ಕಡ್ಡಾಯಗೊಳಿಸಲು ಅವರಿಗೆ ಅಧಿಕಾರಸ್ಥ ವರ್ಗದ ಸಹಾಯಹಸ್ತ ಬೇಕಾಗಿತ್ತು. ಅದನ್ನು ಸಾಧಿಸಲು ಪುರೋಹಿತ ಮನಸ್ಸುಗಳು ತುಂಬಾ ಕಷ್ಟಪಡಬೇಕಾದ ಪರಿಸ್ಥಿತಿಯೇನೂ ಎದುರಾಗಲಿಲ್ಲ. ಏಕೆಂದರೆ ಪ್ರತಿಯೊಂದು ಆಳುವ ವರ್ಗಕ್ಕೂ ಒಂದು ಚಾಣಕ್ಯ ಮನಸ್ಸಿನ ಅನಿವಾರ್ಯತೆಯಿರುತ್ತದೆ. ಅದರಂತೆ ವಿದ್ಯೆಯನ್ನು ಕೇವಲ ತಮ್ಮ ವರ್ಗಕ್ಕೇ ಸೀಮಿತವಾಗಿರಿಸಿ ಕೊಂಡಿದ್ದ ಪುರೋಹಿತ ವರ್ಗ ತಂತ್ರಗಾರಿಕೆಯಲ್ಲಿ, ಯೋಜನೆಗಳನ್ನು ರೂಪಿಸುವಲ್ಲಿ ಪರಿಣಿತಿ ಹೊಂದಿದ್ದರು. ಇದರಿಂದ ಜನರ ಮೇಲೆ ತಮ್ಮ ಅಧಿಕಾರವನ್ನು ಚಲಾಯಿಸಲು ಅವರಿಗೆ ಇವರ, ಇವರಿಗೆ ಅವರ ಅನಿವಾರ್ಯತೆ ಕಂಡುಬಂದು ಅಧಿಕಾರಸ್ಥ ವರ್ಗ ಮತ್ತು ಪುರೋಹಿತವರ್ಗ ಜೊತೆಗೂಡಿ ಮುಂದುವರಿಯಲು ಹಾದಿ ಸುಗಮವಾಯಿತು. ಈ ರೀತಿ ಪುರೋಹಿತ ಮನಸ್ಸುಗಳ ಕುತಂತ್ರಗಳೆಲ್ಲ ಕಾನೂನು, ಕಟ್ಟಳೆಗಳಾಗಿ ಜನರ ಮೇಲೆ ಬಲವಂತವಾಗಿ ಹೇರಲ್ಪಟ್ಟವು.

ಮೇಲಿನ ಸಾಲುಗಳಲ್ಲಿ ಕುವೆಂಪು ಸಹ ಈ ವಿಷಯದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಜೊತೆಗೆ ಈ ಎರಡು ವರ್ಗಗಳ ಸ್ನೇಹವೇ ಅವರಿಗೆ ಉರುಳಾಗುವವರೆಗೆ ಈ ಧರೆಗೆ ಸುಖವಿಲ್ಲವೆಂಬುದು ಅವರ ನಂಬುಗೆ.

ಮಧ್ಯ ಏಷ್ಯಾದಿಂದ ಆರ್ಯರು ಭಾರತಕ್ಕೆ ಪಂಜಾಬಿನ ಮೂಲಕ ಆಗಮಿಸುವುದಕ್ಕಿಂತ ಮೊದಲು ಇಲ್ಲಿನ ಮೂಲನಿವಾಸಿಗಳು ಬುಡಕಟ್ಟು ವರ್ಗಗಳಾಗಿದ್ದರು. ಆದರೂ ನಾಗರೀಕತೆಯ ಹಾದಿಯಲ್ಲಿ ಪಯಣ ಬೆಳೆಸಿದ್ದರು. ಆಗ ಅವರ ಮುಖ್ಯ ಆಚರಣೆಗಳು ಸೂರ್ಯ ಚಂದ್ರರ ಪೂಜೆ, ಗಿಡ, ಮರಗಳ ಆರಾಧನೆ ಉಳಿದಂತೆ ಬೇಟೆಯೇ ಮುಖ್ಯ ಕಸುಬಾಗಿದ್ದ ಕಾರಣ ಬೇಂಟೆ ದೇವರಗಳನ್ನು ಸೃಷ್ಟಿಸಿಕೊಂಡು ಅದರಲ್ಲೇ ಶ್ರದ್ಧಾ ಭಕ್ತಿಯಿಂದ ಜೀವನ ನಡೆಸುತ್ತಿದ್ದರು. ನಂತರದಲ್ಲಿ ಆರ್ಯರ ಪ್ರಭಾವದಿಂದ ಉದ್ಭವಿಸಿದ ರಾಮ, ಕೃಷ್ಣರ ಪರಿಕಲ್ಪನೆಗಳೇ ಅವರಿಗೆ ತಿಳಿದಿರಲಿಲ್ಲ. 'ಬೆರಳ್ ಗೆ ಕೊರಳ್' ನಾಟಕದಲ್ಲಿ ಏಕಲವ್ಯನ ಅಬ್ಬೆಯ ಮಾತುಗಳಲ್ಲಿ ಇದು ಸ್ಪಷ್ಟವಾಗುತ್ತದೆ.

''***ಏಕಲವ್ಯ*** *: ದೇವರೆ ದಿಟಂ!*

***ಅಬ್ಬೆ*** *: ಆವ ದೇವರೋ ?*

*ನಮಗಿರ್ಪುದೊಂದೆ : ಬೇಂಟೆ ದೇವರ್ !*

*ನೀನಾಡುವಾ ಗೊಂಬೆ ಬೇಂಟೆ ದೇವರೇನ್?*''[೩]

ಅಬ್ಬೆಯ ಮುಗ್ಧಮಾತುಗಳಲ್ಲಿ ಸ್ಪಷ್ಟವಾಗುವುದೆಂದರೆ ಅವಳಿಗೆ ಇರುವುದೊಬ್ಬನೆ ದೇವರು; ಅವನೆ ಬೇಂಟೆ ದೇವರು. ಅದನ್ನುಳಿದು ಬೇರಾವ ದೇವರ ಬಗ್ಗೆಯು ಅವಳು ಕೇಳರಿಯಲು. ಆದರೆ ಪುರೋಹಿತಶಾಹಿ ಆರಂಭದಿಂದಲೇ ಎಲ್ಲವನ್ನು ರೋಚಕಗೊಳಿಸಿ, ಸಾವಿರಾರು ದೇವರನ್ನು ಸೃಷ್ಟಿಸಿ, ವೇದಗಳನ್ನು ತಿರುಚಿ ಅವುಗಳಿಗೆ ಪ್ರಕ್ಷಿಪ್ತಗಳನ್ನು ಸೇರಿಸಿ ಕೇವಲ ಸುಳ್ಳುಗಳನ್ನೇ ಒಂದು ಧರ್ಮವಾಗಿ ಬೆಳೆಸಿದರು. ಅಬ್ಬೆಯಂತ ಸಾಮಾನ್ಯಳಿಗೆ ಇದು ಅರಿವಿಗೆ ಬರುವುದೇ ಇಲ್ಲ. ಆದರೆ ಏಕಲವ್ಯನಿಗೆ ನಾಡಜನರ ಸಂಪರ್ಕವಿದ್ದುದರಿಂದ ಅವನಿಗೆ ಇದು ಇಳಿದಿತ್ತು.

*''ಎನಿತೆನಿತೊ ದೇವರ್ಕಳಿರ್ಪರ್ ಆ ನಾಡಿನೊಳ್''* [6]

*ಎಂದು ತನ್ನ ತಾಯಿಗೆ ತಿಳಿ ಹೇಳುತ್ತಾನೆ. ಆದರೆ ಆ ಎನಿತೆನಿತೊ* ದೇವರುಗಳಲ್ಲಿ ಒಬ್ಬನೆಂದು ಏಕಲವ್ಯ ಭಾವಿಸಿದ್ದ ದೇವರು ತನ್ನ ಹೆಬ್ಬೆರಳನ್ನು ಬಲಿ ಪಡೆಯುತ್ತಾನೆಂದು ಅವನಿಗೆ ತಿಳಿದಿರಲಿಲ್ಲ.

ಜಗತ್ತಿನಲ್ಲಿ ಎಲ್ಲದಕ್ಕಿಂತಲೂ ಧರ್ಮವೇ ದೊಡ್ಡದು, ಪವಿತ್ರವಾದುದು ಎಂದು ಹೇಳಲಾಗುತ್ತದೆಯಾದರೂ ಅದರಲ್ಲಿನ ದ್ವಂದ್ವಗಳಿಗೆ ಮಾತ್ರ ಕೊನೆಯೆಂಬುದೇ ಇಲ್ಲ. ಪುರೋಹಿತಶಾಹಿಯನ್ನು ವಿರೋಧಿಸುವ ಪ್ರತಿಯೊಬ್ಬರನ್ನು ಕಾಡುವ ಮುಖ್ಯ ಸಂಗತಿಯೆಂದರೆ ಈ ದ್ವಂದ್ವ ನಿಲುವುಗಳೆ. ಕುವೆಂಪುರಂತವರನ್ನೂ ಕಾಡಿದ್ದು ಇದೇ ದ್ವಂದ್ವಗಳು. ಇವುಗಳನ್ನೇ ಇಲ್ಲಿ ಕುವೆಂಪು ಮುಖ್ಯ ಪ್ರಶ್ನೆಗಳಾಗಿ ಎತ್ತುತ್ತಾರೆ. ಅವರ 'ಜಲಗಾರ' ನಾಟಕದಲ್ಲಿ ಬಂದಿರುವ ಈ ಮಾತುಗಳನ್ನು ಗಮನಿಸಿ;

***''ಮೊದಲ ತರುಣ***

*ಪೂರ್ವಿಕರ ಮೂಢತನ ಕಾದಿಯೆಂಬುವುದೆಲ್ಲಿ?*

*ಅಂತವೆಂಬುವುದೆಲ್ಲಿ? ಹೇಳುವುದು ಒಂದು,*

*ಮಾಡುವುದು ಮತ್ತೊಂದು! ಜಗದೊಡೆಯನೆಲ್ಲಿಯುಂ*

*ಇರುವನೆಂಬರು ಒಮ್ಮೆ! ಗುಡಿಯಲರಸುವರೊಮ್ಮೆ!*

*ನಿರಾಕಾರನವನೆಂದು ಸಾರುವರು ಒಮ್ಮೆ!*

*ಮೂರ್ತಿಗಳ ಮಾಡಿ ಆರಾಧಿಸುವರಿನ್ನೊಮ್ಮೆ!*

*ಒಂದು ಸಲ ಸರ್ವರೊಳು ಆವನಿರುವನೆನ್ನುವರು;*

*'ಹೊಲೆಯ ನೀ ದೂರವಿರು' ಎಂದೆಂಬರಿನ್ನೊಮ್ಮೆ!*

*ನುಡಿಗೂ ನೆಗಳ್ತೆಗೂ ಸಂಬಂಧವೇ ಇಲ್ಲ!''* [7]

ಇದು ಪ್ರಜ್ಞಾವಂತ ಸಮಾಜವನ್ನು ಕಾಡುತ್ತಿರುವ ದ್ವಂದ್ವ ನಿಲುವುಗಳ ಪಟ್ಟಿ. ಇಂಥ ಧರ್ಮದ ಅವಶ್ಯಕತೆಯನ್ನು ಇಲ್ಲಿ ಪ್ರಶ್ನಿಸಲಾಗಿದೆ. ಏಕೆಂದರೆ ಈ ನಿಲುವುಗಳು ಮನುಷ್ಯನನ್ನು ಮನುಷ್ಯನಿಂದಲೇ ಬೇರ್ಪಡಿಸಿ ಒಬ್ಬ ಇನ್ನೊಬ್ಬನಿಂದ ಶೋಷಣೆಗೊಳಗಾಗಲು ಅನುವು ಮಾಡಿಕೊಡುತ್ತವೆ. ಪುರೋಹಿತಶಾಹಿಯ ಇದೇ

ರೀತಿಯ ದ್ವಂದ್ವವನ್ನು ನಾವು 'ಶೂದ್ರ ತಪಸ್ವಿ' ನಾಟಕದಲ್ಲಿಯೂ ಕಾಣಬಹುದು. ಶ್ರೀರಾಮ ಮತ್ತು ಬ್ರಾಹ್ಮಣನ ನಡುವೆ ತಪ್ಪಸ್ಸನ್ನು ಕುರಿತ ಸಂಭಾಷಣೆಯಲ್ಲಿ ಇದು ಅನಾವರಣಗೊಳ್ಳುತ್ತದೆ.

" **ಶ್ರೀರಾಮ**

*ತಪಂ ಪೂಜ್ಯಕರ್ಮಮಲ್ತೆ ದ್ವಿಜೇಂದ್ರ?*

**ಬ್ರಾಹ್ಮಣ**

*ತಪಕ್ಕೆಣೆಯುಂಟೆ, ರಾಘವೇಂದ್ರ?*

**ಶ್ರೀರಾಮ**

*ತಪಂಗೆಯ್ವನುಂ ಪೂಜ್ಯನಲ್ತೆ, ವಿಬುಧವರ್ಯ?*

**ಬ್ರಾಹ್ಮಣ**

*ದಿಟಂ, ಧರ್ಮಮೂರ್ತಿ*

**ಶ್ರೀರಾಮ**

*ಪೂಜ್ಯ ಹನನಂ ಪಾಪಕರಮಲ್ತೆ, ಸತ್ವಶೀಲ?*

**ಬ್ರಾಹ್ಮಣ**

*ನಿಸ್ಸಂಶಯಂ, ವಾಲಿಸಂಹಾರಿ.*

**ಶ್ರೀರಾಮ**

*(ಹುಬ್ಬುಗಂಟಿಕ್ಕಿ, ನಿಧಾನವಾಗಿ ಹೇಳುತ್ತಾನೆ)*

*ಅಂತೆವೋಲ್*

*ಈ ತಪಸ್ವಿಯಂ ಕೊಲ್ವುದುಂ ಪಾಪಮಾಗದೆ?"* [೬]

ಇಲ್ಲಿನ ದ್ವಂದ್ವವೆಂದರೆ, ತಪಸ್ಸು ಮಾಡುವುದು ಒಂದು ಪುಣ್ಯ ಕಾರ್ಯವೆಂಬುದನ್ನು ಬ್ರಾಹ್ಮಣ ಪ್ರತಿಪಾದಿಸುತ್ತಾನೆ. ಆದರೆ ಅದೇ ತಪಸ್ಸನ್ನು ಕೈಗೊಂಡಿರುವ ಶಂಬೂಕನನ್ನು ಕೊಲ್ಲುವಂತೆಯೂ ಸೂಚಿಸುತ್ತಾನೆ. ಅದಕ್ಕೆ ಅವನು ಕೊಡುವ ಕಾರಣ ಮಾತ್ರ ಪುರೋಹಿತಶಾಹಿಯ ಕುತಂತ್ರಗಳಲ್ಲಿ ಮುಖ್ಯ ಅಸ್ತ್ರವಾದ 'ಜಾತಿ'ಯ ಆಧಾರ

"**ಬ್ರಾಹ್ಮಣ**

*ವಸಿಷ್ಠ ಶಿಷ್ಯ,*

*ತರ್ಕಕೆ ಮಿಗಿಲ್ ಶ್ರುತಿವಾಕ್ಯಮೈಸೆ!*

*ತಪಕ್ಕನಧಿಕಾರಿ ಶೂದ್ರನ್*

*ಎಂಬುದದು ಶಾಸ್ತ್ರ ಪ್ರಸಿದ್ಧಂ."* [೭]

ತಪಸ್ಸು ಮಾಡುತ್ತಿರುವವನು ಶೂದ್ರನಾದ ಕಾರಣ ಅವನನ್ನು ಶಿಕ್ಷಿಸಬೇಕು. ಅದು ಶಾಸ್ತ್ರ ಪ್ರಸಿದ್ಧಂ. ಪಕ್ಷಪಾತ ಕೃತಿಯಾದ 'ಮನುಸ್ಮೃತಿ'ಯಲ್ಲಿ ಈ ಕಟ್ಟಳೆಯನ್ನು ವಿಧಿಸಲಾಗಿದೆ.

ಈ ರೀತಿಯ ಎಲ್ಲಾ ನ್ಯೂನ್ಯತೆಗಳ ವಿರುದ್ಧ ಕುವೆಂಪು ಬಂಡಾಯವೇಳುತ್ತಾರೆ. ಅವರ ಜಲಗಾರ ಮತ್ತು ಶ್ರೀರಾಮ ಈ ಇಬ್ಬರು ಪ್ರಮುಖವಾಗಿ ಈ ಪುರೋಹಿತಶಾಹಿಯ ತಂತ್ರಗಾರಿಕೆಯನ್ನು ಅರಿಯುವಲ್ಲಿ ಸಫಲರಾಗಿ ಅವುಗಳ ವಿರುದ್ಧ ಹೊಸ ಬಗೆಯಲ್ಲಿ ಮುಖಾಮುಖಿಯಾಗುತ್ತಾರೆ. ಪುರೋಹಿತಶಾಹಿಯ ವಿರುದ್ಧ ಅವರು ಹೂಡುವ ಚಳುವಳಿ ಒಂದು ಅಂಶವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಅದೆಂದರೆ, 'ಇನ್ನು ನಿಮ್ಮ ದಬ್ಬಾಳಿಕೆಗೆ ನಾವು ಜಗ್ಗುವುದಿಲ್ಲ' ಎನ್ನುವುದು. ಕನ್ನಡ ಸಾಹಿತ್ಯದಲ್ಲಿ ಈ ರೀತಿಯ ಚಳುವಳಿ ಮೂಡಲು ಮುಖ್ಯ ಕಾರಣ ಬ್ರಿಟಿಷರ ಮೂಲಕ ಕೇವಲ ಪುರೋಹಿತಶಾಹಿಗಳ ಸ್ವತ್ತಾಗಿದ್ದ ಅಕ್ಷರ ಕಲಿಕೆಯ ಅವಕಾಶ ಎಲ್ಲರಿಗೂ ದೊರೆತದ್ದು. ಕುವೆಂಪು ಸ್ವತ: ಶೂದ್ರ ವರ್ಗದಿಂದ ಬಂದಿದ್ದು, ಅವರೂ ಜಾತಿಯ ಹೆಸರಿನ ಪಿಡುಗಿಗೆ ಬಲಿಯಾಗಿದ್ದ ಕಾರಣ, ಅಕ್ಷರ ಕಲಿತ ಅವರೂ ಪುರೋಹಿತಶಾಹಿಯ ವಿರುದ್ಧ ಸಮರ ಹೂಡುತ್ತಾರೆ.

ಧರ್ಮದ ಹೆಸರಿನಲ್ಲಿ ಶತಮಾನಗಳ ಕಾಲ ಜನರ ಮನಸ್ಸಿನಲ್ಲಿ ಬಿತ್ತಲಾಗಿರುವ ವಿಷ ಬೀಜ ಮೊಳೆತು ಹೆಮ್ಮರವಾಗಿ ಬೆಳೆದು ನಿಂತಿದೆ. ಇಂದು ದಮನಕ್ಕೊಳಗಾದ ವರ್ಗಗಳೂ ಸಹ ಇದನ್ನೇ ನಂಬಿ ಧರ್ಮವನ್ನು ಪ್ರಕ್ಷಿಪ್ತ ಸುಳ್ಳು, ಮೋಸ, ವಂಚನೆಗಳ ಸಮೇತವಾಗಿ ಒಪ್ಪಿಕೊಂಡಿರುವುದಂತೂ ಆಘಾತಕಾರಿ ವಿಷಯ. ಮನೋದಾಸ್ಯದಲ್ಲಿ ಮುಳುಗಿದ್ದ ಜನ ಅದನ್ನು ತಮ್ಮ ಜೀವನದ ಒಂದು ಭಾಗವಾಗಿ ಸ್ವೀಕರಿಸಿದ್ದಾರೆ. ತಮಗೆ ತಾವೇ ಕೀಳೆಂದು ನಂಬಿಸಲಾದ ಸತ್ಯವನ್ನು ತಾವೇ ಮುಂದಾಗಿ ಒಪ್ಪಿಕೊಳ್ಳುತ್ತಿದ್ದಾರೆ. ಪುರೋಹಿತಶಾಹಿಗಳ ಕ್ರೂರ ಕೃತ್ಯಗಳಿಗೆ ಕೈ ಜೋಡಿಸುತ್ತಿದ್ದಾರೆ. 'ಹಿಂದೂ ನಾವೆಲ್ಲ ಒಂದು' ಎಂಬ ಕುತಂತ್ರಕ್ಕೆ ಬಲಿಯಾಗುತ್ತಿದ್ದಾರೆ. ಇದರ ಮೂಲಕ ಪುರೋಹಿತಶಾಹಿಗಳು ಮಸೀದಿ ಒಡೆಯುವ, ಪಾದ್ರಿಗಳನ್ನು ಸುಡುವ ಕಾರ್ಯಗಳನ್ನು ಸಲೀಸಾಗಿ ಸಾಧಿಸಲು ಸಾಧ್ಯವಾಗಿದೆ. ಇದೆಲ್ಲದರ ಬಗ್ಗೆ ಕುವೆಂಪುರವರಿಗೆ ಆಗಲೇ ಆತಂಕವಿತ್ತು. ಆದ್ದರಿಂದಲೇ ಅವರು ತಮ್ಮ 'ಜಲಗಾರ'ನ ಮೂಲಕ ಧರ್ಮದ ವಿರುದ್ಧ ಧ್ವನಿ ಎತ್ತಿ ಕಾಯಕ ತತ್ವವನ್ನು ಪ್ರತಿಪಾದಿಸುವ ಪ್ರಯತ್ನ ಮಾಡಿದರು.

## ೧ . ೨ ಗುಡಿಗಳ ಕುರಿತು ಅಸಮಾಧಾನ

*"......ಗುಡಿಗಳಿವು ಪಾಪಿಗಳ ಭೋಗಿಗಳ*

*ಗೂಡುಗಳು!......"*[೮]

ತಿರುಕನ ಮೂಲಕ ಕುವೆಂಪು ಹೊರಡಿಸುವ ಈ ಮಾತುಗಳು, ಗುಡಿಗಳ ಬಗ್ಗೆ ಕುವೆಂಪು ಅವರ ನಿಲುವನ್ನು ಸ್ಪಷ್ಟಪಡಿಸುತ್ತವೆ. ಗುಡಿಗಳು ಪಾಪಿಗಳ, ಭೋಗಿಗಳ ಗೂಡುಗಳು ಎಂದು ಕುವೆಂಪು ಜರಿಯುವುದರಲ್ಲಿ ಸತ್ಯಾಂಶವಿದೆ. ಗುಡಿಗಳು ಸದಾಕಾಲ ಪುರೋಹಿತಶಾಹಿ ವರ್ಗದ ಖಜಾನೆಗಳಾಗಿ, ಅವರ ಎಲ್ಲಾ ಪಾಪ ಕರ್ಮಗಳಿಗೆ ಭದ್ರಕೋಟೆಗಳಾಗಿಯೇ ಉಳಿದುಕೊಂಡು ಬಂದಿವೆ. ಹುಟ್ಟಿನಿಂದಲೇ ಬ್ರಾಹ್ಮಣನಿಗೆ ಈ ದೇವಾಲಯಗಳ

ಉಸ್ತುವಾರಿ, ಪೂಜೆಯ ಅಧಿಕಾರ, ಗರ್ಭಗುಡಿಗೆ ಪ್ರವೇಶ ಮುಂತಾದ ಕಟ್ಟಳೆಗಳನ್ನು ರೂಪಿಸಿದರು. ಧಾರ್ಮಿಕ ಸಂವಿಧಾನದ ರೀತಿಯಲ್ಲಿ ಗುಡಿಗಳನ್ನು ಬಿಂಬಿಸುತ್ತಾ, ಆ ಕಲ್ಲು ಮಣ್ಣಿನ ಕಟ್ಟಡಕ್ಕೆ ಇಲ್ಲಸಲ್ಲದ ಪಾವಿತ್ರ್ಯತೆಯನ್ನು ಆರೋಪಿಸಿದರು.

ವಾಸ್ತವವಾಗಿ ದೇವಾಲಯ ಪರಿಕಲ್ಪನೆಯ ಹಿಂದೆ ಒಂದು ದೊಡ್ಡ ತಂತ್ರವೇ ಅಡಗಿತ್ತು. ಪುರೋಹಿತ ವರ್ಗಕ್ಕೆ ಜನರಿಂದ ಹಣ ಕೀಳಲು, ಅದರ ಮೂಲಕ ತಮ್ಮ ಭೋಗ ಜೀವನವನ್ನು ನಡೆಸಲು ಒಂದು ಭದ್ರ ಮತ್ತು ಶಾಶ್ವತ ಸ್ಥಾವರದ ಅವಶ್ಯಕತೆಯಿತ್ತು. ಆ ಹಿನ್ನಲೆಯಲ್ಲಿ ಮೂಡಿದ ಕಲ್ಪನೆಯೇ ಈ ದೇವಸ್ಥಾನವೆಂಬ ಕಟ್ಟಡ. ಎಂದಿನಂತೆ ತಮ್ಮ ಪೋಷಣೆಗೆ ಸುಳ್ಳು ಶಾಸ್ತ್ರ ಪುರಾಣಗಳನ್ನು ಇವರು ರೂಪಿಸಿದರು. ಅಂದಿನ ರಾಜರು, ಶ್ರೀಮಂತರನ್ನು ಪುಸಲಾಯಿಸಿ ಭವ್ಯ ಮಂದಿರಗಳನ್ನು ನಿರ್ಮಿಸಿಕೊಂಡರು. ನಂತರ ಅದರ ಎಲ್ಲ ರೀತಿಯ ಹಕ್ಕುಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಅಲ್ಲಿಂದ ಶುರುವಾದ ಲೂಟಿ ಇಂದಿಗೂ ನಿಂತಿಲ್ಲ. ಒಂದು ಕಡೆ ಭಕ್ತಾದಿಗಳಿಂದ ಬರುವ ಕಾಣಿಕೆಗಳ ರಾಶಿಯಾದರೆ, ಇನ್ನೊಂದೆಡೆ ರಾಜರಿಂದ ದೊರೆಯುತ್ತಿದ್ದ ದತ್ತಿಗಳಿಂದ ದೇವಸ್ಥಾನಗಳು ದೇಶದ ಅತಿದೊಡ್ಡ ಭಂಡಾರಗಳಾದವು. ಇದರಿಂದ ಪುರೋಹಿತ ವರ್ಗ ತಮ್ಮ ಭೋಗ ಜೀವನಕ್ಕೆ ಯಾವುದೇ ಕುಂದು ಬರದಂತೆ ಆರಾಮವಾಗಿ ಸುಖಜೀವನ ನಡೆಸುತ್ತಿದ್ದರು. ತಮ್ಮ ಭೋಗಗಳನ್ನು ವಿಸ್ತರಿಸಿಕೊಂಡ ಇವರು ಅಲ್ಲಿ ದೇವದಾಸಿಯರ ದಂಡನ್ನು ಸೇರಿಸಿಕೊಂಡು ಎಲ್ಲಾ ರೀತಿಯ ವ್ಯಭಿಚಾರಗಳಿಗೂ ದೇವಾಲಯಗಳನ್ನು ಸುರಕ್ಷಿತ ಸ್ಥಾನಗಳಾಗಿ ಬಳಸಿಕೊಂಡರು.

ತಮ್ಮ ಗುಪ್ತ ವ್ಯವಹಾರಗಳು ಮತ್ತು ಬಂಡಾರದ ಗೌಪ್ಯತೆಯನ್ನು ಕಾಪಾಡಲು ದೇವಾಲಯ ಪ್ರವೇಶವನ್ನು ಕೆಲವರಿಗೆ ಮಾತ್ರ ಸೀಮಿತಗೊಳಿಸಿದರು. ಗರ್ಭಗುಡಿಗಂತೂ ಯಾರಿಗೂ ಪ್ರವೇಶವಿಲ್ಲದಂತೆ ನಿಯಮ ರೂಪಿಸಿದರು. ಏಕೆಂದರೆ ತಮ್ಮ ಬಂಡಾರ ಮತ್ತು ದೇವದಾಸಿಯರ ಜೊತೆ ಅವರು ನಡೆಸುತ್ತಿದ್ದ ರಾಸಲೀಲೆಗಳನ್ನು ಗೋಪ್ಯವಾಗಿಡಬೇಕಿತ್ತು. ಈ ರಹಸ್ಯವನ್ನು ಅರಿತಿದ್ದ ಮುಸ್ಲಿಮ್ ದೊರೆಗಳು ಭಾರತದ ಮೇಲೆ ಧಾಳಿ ನಡೆಸಿದ ಸಂದರ್ಭದಲ್ಲಿ ಅವರು ದೇವಾಲಯಗಳಿಗೆ ಲಗ್ಗೆ ಹಾಕಿ ಅಲ್ಲಿದ್ದ ಅಪಾರ ಪ್ರಮಾಣದ ಹಣ, ಚಿನ್ನ, ವಜ್ರ ಮುಂತಾದ ಬಹು ಮೌಲ್ಯದ ವಸ್ತುಗಳನ್ನು ಲೂಟಿ ಮಾಡಿ ಹೊರಟರು. ಕ್ರಿ.ಶ. ೧೦೨೦ರಲ್ಲಿ ಮಹಮ್ಮದ್ ಘಜ್ನಿ ಗುಜರಾತ್‌ನ ಸೋಮನಾಥ ದೇವಾಲಯವನ್ನು ಕೊಳ್ಳೆ ಹೊಡೆದ ಸಂದರ್ಭದಲ್ಲಿ,

"ಹಿಂದೂಸ್ತಾನದ ರಾಜರುಗಳು ಅದಕ್ಕೆ ಹತ್ತು ಸಾವಿರ ಗ್ರಾಮಗಳನ್ನು ದತ್ತು ಬಿಟ್ಟಿದ್ದರು. ಒಂದು ಸಾವಿರ ಬ್ರಾಹ್ಮಣರು ಅಲ್ಲಿನ ವಿಗ್ರಹಗಳನ್ನು ನಿರಂತರವಾಗಿ ಪೂಜಿಸುತ್ತಿದ್ದರು .... ಗೆಜ್ಜೆಗಳನ್ನು ಕಟ್ಟಿದ್ದ ಇನ್ನೂರು ಮಣ ತೂಕದ ಚಿನ್ನದ ಸರವನ್ನು ದೇವಾಲಯದ ಒಂದು ಮೂಲೆಯಲ್ಲಿ ತೂಗು ಹಾಕಿದ್ದರು ..... ಐನೂರು ಮಂದಿ ಹಾಡಿ ನರ್ತಿಸುವ ದೇವದಾಸಿಯರು ಮತ್ತು ಇನ್ನೂರು ಜನ ಸಂಗೀತಗಾರರು ದೇವಸ್ಥಾನದ ಸೇವೆಯಲ್ಲಿ ನಿರತರಾಗಿದ್ದರು. ಅವರ ಅಗತ್ಯಗಳನ್ನೆಲ್ಲ ದತ್ತಿಗಳ ಮತ್ತು ಕಾಣಿಕೆಗಳಿಂದ ಒದಗಿಸಲಾಗುತ್ತಿತ್ತು.... ಹಿಂದೂಸ್ತಾನದ

ಅನೇಕ ರಾಜರು ತಮ್ಮ ಪುತ್ರಿಯರನ್ನು ಸೋಮನಾಥನಿಗೆ ಅರ್ಪಿಸಿ ಅಲ್ಲಿಗೆ ಕಳುಹಿಸಿದ್ದರು. ಘಜ್ನಿ ಮಹಮದ್ ಲೂಟಿ ಮಾಡಿದ ಚಿನ್ನ ಮತ್ತು ಅಮೂಲ್ಯ ಮುತ್ತು ರತ್ನಗಳ ನೂರನೇ ಒಂದು ಭಾಗ ಹಿಂದೂಸ್ತಾನದ ಯಾವುದೇ ಮಹಾರಾಜನ ಖಜಾನೆಯಲ್ಲೂ ಇರಲಿಲ್ಲ.”[೯]

ಎಂದು ತಿಳಿದು ಬರುತ್ತದೆ. ಇದರಿಂದ ಸ್ಪಷ್ಟವಾಗುವ ಪಿಚಾರವೆಂದರೆ ದೇವಾಲಯಗಳು ಭಕ್ತಿಯ ಕೇಂದ್ರಗಳಂತೆ ಹೊರಗಿನ ಜಗತ್ತಿಗೆ ಬಿಂಬಿಸಲ್ಪಟ್ಟು ಒಳಗೆ ಭೋಗದ ಭದ್ರಕೋಟೆಗಳಾಗಿದ್ದವು.

ಇಂತಹ ಕೃತ್ಯಗಳಿಗಾಗಿ ಮೀಸಲಾಗಿರುವ ಗುಡಿಗಳಲ್ಲಿ ದೇವರು ಇರಲು ಸಾಧ್ಯವೇ ಇಲ್ಲ ಎಂಬುದು ಕುವೆಂಪು ಅವರ ಅಭಿಪ್ರಾಯ. ಅವರ ‘ದೇವರು - ಪ್ರಜಾರಿ’ ಎಂಬ ಕವನವೂ ಇದನ್ನೇ ಸೂಚಿಸುತ್ತದೆ.

*“ದೇವರ ಗುಡಿಯಲಿ*
*ಪೂಜಾರಿಯೆ ದಿಟದ ನಿವಾಸಿ,*
*ದೇವರೆ ಪರದೇಶಿ!”* [೧೦]

ಇಲ್ಲದ ದೇವರ ಹೆಸರಿನಲ್ಲಿ ಕಟ್ಟಿದ ಕಟ್ಟಡದಲ್ಲಿ ಪೂಜಾರಿಗಳದೇ ಕಾರುಬಾರು. ಅವರ ಅಪ್ಪಣೆ ಇಲ್ಲದೆ ಯಾರೂ ಗುಡಿ ಪ್ರವೇಶ ಮಾಡುವ ಹಾಗಿಲ್ಲ, ಪೂಜೆ ಮಾಡುವ ಹಾಗಿಲ್ಲ. ತಮ್ಮ ಕುತಂತ್ರಗಳಿಂದ ದೇವರ ಲೀಲೆಗಳನ್ನು ಉದ್ಧರಿಸುತ್ತಾ ಜನರನ್ನು ವಂಚಿಸಿ ದೇವರ ಹೆಸರಿನಲ್ಲಿ ದುಡಿಯುವ ಕಾಯಕ ನಿರಂತರವಾಗಿ ಸಾಗಿ ಬಂದಿದೆ.

ಈ ಕಾರಣದಿಂದಲೇ ಕುವೆಂಪು ಅವರ ಜಲಗಾರ ಗುಡಿಗೆ ಹೋಗಲು ನಿರಾಕರಿಸುತ್ತಾನೆ. ಕುತಂತ್ರಿಗಳ, ಮೌಢ್ಯ ಸೃಷ್ಟಿಯ ಕಾರ್ಖಾನೆಗಳಾದ ಗುಡಿಗಳು ಜಾತಿಯ ಹೆಸರಿನಲ್ಲಿ ಪ್ರವೇಶಗಳನ್ನು ಸೀಮಿತಗೊಳಿಸಿವೆಯೆಂಬ ಕೋಪ ಅವನಿಗೆ. ಅದಕ್ಕೇ ಅವನು;

*“ನನಗೇಕೆ ಶಿವಗುಡಿಯ ಜಾತ್ರೆ? ಜೋಯಿಸರು*
*ದೇಗುಲದ ಬಳಿಗೆನ್ನ ಸೇರಿಸರು.”* [೧೧]

ಎಂದು ತನ್ನ ಅಸಮಾಧಾನವನ್ನು ಹೊರಗೆಡಹುತ್ತಾನೆ. ಆದರೆ ಜಾತಿ ಪದ್ಧತಿಯನ್ನು ಪೂರ್ವ ಜನ್ಮದ ಕರ್ಮದ ಫಲವೆಂದು ನಂಬಿಸುವಲ್ಲಿ ಪುರೋಹಿತಶಾಹಿ ವರ್ಗ ಸಫಲವಾಗಿದೆ. ಆದ್ದರಿಂದ ಜಲಗಾರನ ಮಾತಿಗೆ ಪುರೋಹಿತಶಾಹಿಯನ್ನು ಒಪ್ಪಿಕೊಂಡಿರುವ ರೈತ

*“ದೂರದಲ್ಲಿಯೆ ನಿಂತು ಕೈ ಮುಗಿದು ಬಾ.”* [೧೨]

ಎಂಬ ಸಲಹೆ ನೀಡುತ್ತಾನೆ. ಆದರೆ ಅದಕ್ಕೆ ಒಪ್ಪದ ಜಲಗಾರ,

*“ಕರ್ಮವಾರಾಧನೆ, ಸೇವೆಯೆ ಪೂಜೆ,*
*ನನ್ನ ಭಾಗಕೆ ಪೊರಕೆ ಆರತಿ. ಗುಡಿಸುವುದೆ*

*ನನ್ನ ದೇವರ ಪೂಜೆ ! - ನಿನ್ನೆ ದೇಗುಲದೆಡೆಗೆ*

*ಹೋದೆನ್ನ ಕಂದನಂ ಬೈದಿರಿದು ನೂಕಿದರು.*

*ಶಿವಗುಡಿಯ ಶಿವನು ಜೋಯಿಸರ ಶಿವನಂತೆ.*

*ನನ್ನ ಶಿವನೀ ಮಣ್ಣಿನಲ್ಲಿಹನು. ನನ್ನ ಶಿವ*

*ಕೊಳೆತ ಕಸದೊಳಿಹನು. ಕಪ್ಪುರದೊಳಿಲ್ಲ;*

*ಮಂಗಳಾರತಿಯೊಳಿಲ್ಲ; ಹೂವುಗಳಲಿಲ್ಲ.*

*ಯಾವೊಡೆಯೊಳಾನಿಹೆನೋ ಅವನಲ್ಲಿಯೇ ಇಹನು.*

*ನನ್ನೆದೆಯ ದೇಗುಲ; ನನ್ನೊಲ್ಮೆಯದೆ ಪೂಜೆ.*

*ನಾನೆಲ್ಲಿ ಭಕ್ತಿಯಿಂ ಕೈಮುಗಿವೆನೋ ಅಲ್ಲಿ*

*ತಾನಿಹನು. ನಾನೆಲ್ಲಿ ಸತ್ಕರ್ಮವೆಸಗುವೆನೊ*

*ಅಲ್ಲಿ ಮೈದೋರುವನು......"*[೧೩]

ಎಂದು ಹಾರುವರು ಜನರನ್ನು ಮೋಡಿ ಮಾಡಲು ಉಪಯೋಗಿಸುವ ಸಾಲುಗಳನ್ನು ಜಲಗಾರ ಸತ್ಕಾರ್ಯಕ್ಕೆ ಬಳಸುತ್ತಾನೆ. ಆದರೆ ಶತಮಾನಗಳಿಂದ ಮನೋದಾಸ್ಯಕ್ಕೆ ಒಗ್ಗಿರುವ ರೈತನಿಗೆ ಇವೆಲ್ಲ ನಿಲುಕದ ವಿಷಯಗಳಾಗುತ್ತವೆ. ಜಲಗಾರನು ತನ್ನ ಕಾಯಕದಲ್ಲೇ ಭಗವಂತನನ್ನು ಕಂಡಂತೆ ರೈತನೂ ತನ್ನ ಕಾಯಕದಲ್ಲಿ ದೈವತ್ವವನ್ನು ಕಾಣಬೇಕೆಂದು ಜಲಗಾರ ರೈತನಿಗೆ ತಿಳಿಸುವ ಪ್ರಯತ್ನ ಮಾಡುತ್ತಾನೆ.

"        *ಶಿವನ ಕಾಣಲು ನೀನು*

*ಗುಡಿಗೆ ಹೋಗುವೆಯೇನು? ನಿನ್ನ ನೇಗಿಲ ಗೆರೆಯ*

*ದಿವ್ಯ ದೇವಾಲಯದಿ ಶಿವನ ಕಾಣೆಯ ನೀನು?*

*ಉಳುವಾಗ, ನೆಡುವಾಗ ಪೂಜೆ ಮಾಡುವೆ ನೀನು.*

*ದೇಗುಲದ ಪೂಜಕನು ಬೈಗಿನಲಿ ಬೆಳಗಿನಲಿ*

*ಪೂಜಿಸಿದರೇನಂತೆ? ನಮ್ಮ ಜೀವವೆ ನಿಚ್ಚ*

*ಪೂಜೆ. ನಮ್ಮ ಕರ್ಮವೆ ನಿತ್ಯಯೋಗ."*[೧೪]

ಆದರೆ ಜಲಗಾರನ ಈ ಮಾತುಗಳು ರೈತನಿಗೆ ಹುಚ್ಚಾಟವಾಗಿ ಕಂಡು ಬರುತ್ತವೆ. ಏಕೆಂದರೆ ದೇವಾಲಯವನ್ನು, ಪೂಜೆಯನ್ನು ವಿರೋಧಿಸುವವರನ್ನು ಈ ಜಗತ್ತಿನಲ್ಲಿ ತೀವ್ರವಾದಿಗಳಂತೆ ಕಾಣಲಾಗುತ್ತದೆ. ಅದು ಪುರೋಹಿತಶಾಹಿ, ಸಾಮಾನ್ಯನ ಮನಸ್ಸಿನಲ್ಲಿ ಹುಟ್ಟಿಸಿರುವ ಹುಸಿ ಪರಿಕಲ್ಪನೆಗಳ ಪ್ರಭಾವ. ಆದರೆ ಈ ರೀತಿಯ ಮನೋಭಾವದಿಂದ ಜನ ಹೊರಬರಬೇಕು. ಸಂದರ್ಶನವೊಂದರಲ್ಲಿ ಕುವೆಂಪು ಹೇಳುತ್ತಾರೆ.

"ಮತಮೌಢ್ಯದಿಂದ ರೈತರು ಪಾರಾಗದೆ ಹೋದರೆ ಅವರು ಏನು ಮಾಡಿದರೂ ನೀರಿನಲ್ಲಿ ಹೋಮ ಮಾಡಿದಂಗೆ ಆಗುತ್ತೆ. ಧರ್ಮಸ್ಥಳ, ಉಡುಪಿ, ತಿರುಪತಿ, ಮಂತ್ರಾಲಯ, ಗೋಕರ್ಣ ಮುಂತಾದ ಸ್ಥಳಗಳಿಗೆ ಹೋಗೋದನ್ನು ಅವರು ಮೊದಲು ಬಿಡಬೇಕು. ಇದರಿಂದ ಅವರ ಮಾನಸಿಕ ಭಯ ಹೋಗ್ತದೆ. ಮಲೇರಿಯಾ, ಉಬ್ಬಸ, ಇನ್ನೂ ಎಂಥೆಂಥದೋ ಕಾಯಿಲೆಗಳು ವಾಸಿಯಾಗುತ್ತವೆ. ಆಸ್ಪತ್ರೆಗೆ ಹೋಗೋದರಿಂದ ಯಾತ್ರಸ್ಥಳಕ್ಕೆ ಹೋಗೋದರಿಂದಲ್ಲ. ಎಲ್ಲಾ ದೇವರು ದೇವಸ್ಥಾನಗಳನ್ನು ಅವರು ಮೊದಲು ಬಿಡಬೇಕು." [24]

ನಿಜವಾಗಲೂ ರೈತನೇ ದೇಶದ ದೊರೆ. ಅವನಿಲ್ಲದೆ ತಿನ್ನಲು ಅನ್ನ ಬರುವುದಾದರೂ ಎಲ್ಲಿಂದ? ಆದರೆ ಎಂದಿನಂತೆ ನಮ್ಮ ಶ್ರೇಣೀಕೃತ ಸಮಾಜದಲ್ಲಿ ಬಹುಮುಖ್ಯ ಕರ್ಮಕ್ಕೆ ಅತಿ ಕಡಿಮೆ ಮರ್ಯಾದೆ. ಕೇವಲ ದೇವರ ಮುಂದೆ ಗಂಟೆ ಬಾರಿಸಿ, ಕಡ್ಡಿ, ಕರ್ಪೂರ ಹೊತ್ತಿಸಿ ಹುಸಿ ಮಂತ್ರ ಪಠಿಸುವ ಪುರೋಹಿತನೇ ಸರ್ವರಿಗೂ ಶ್ರೇಷ್ಠ. ಅಂದಿನ ಸ್ಥಿತಿ ಅದಾದರೆ ಇಂದು ಅದರ ಜೊತೆಗೆ ರೈತ ಎಂದರೆ ನಗರದ ಜನರಿಗೆ ಒಂದು ಬಗೆಯ ತಾತ್ಸಾರ. ಕೇವಲ ದುಡಿಮೆಗಾಗಿಯೆ ಹುಟ್ಟಿದವರಂತೆ ಯಾಂತ್ರಿಕ ಜೀವನ ನಡೆಸುವ ನಗರದ ನಾಗರೀಕ ಜನ ರೈತನನ್ನು ಕೀಳಾಗಿ ಕಾಣುವುದು ಬೆಂಕಿಗೆ ತುಪ್ಪ ಸುರಿದಂತೆ. ಪುರೋಹಿತಶಾಹಿಯ ದಾಬ್ಬಾಳಿಕೆ ಸಾಲದೆಂಬಂತೆ ನವ ನಾಗರೀಕತೆಯಿಂದಲೂ ದೇಶದ ರೈತನಿಗೆ ಅವಮಾನ. ರಾಜಕಾರಣಿಗಳು ಮೊದಲಿನಿಂದಲೂ ರೈತನನ್ನು ದೇಶದ ಬೆನ್ನೆಲುಬೆಂದು ಹೇಳುತ್ತಾ ಬಂದಿದ್ದಾರೆ. ಅದನ್ನು ಸಾದರ ಪಡಿಸಿದರು ಕೂಡ! ರೈತರ ಬೆನ್ನೆಲುಬುಗಳನ್ನು ಜಗತ್ತಿಗೇ ತೋರುವಂತೆ ಮಾಡುವ ಮೂಲಕ.

ಈಗಿನ ಸಂದರ್ಭದಲ್ಲಿ ನೋಡುವುದಾದರೆ, ಶ್ರೀಮಂತ ದೇಶಗಳ ಒತ್ತಡಗಳಿಗೆ ಮಣಿದು ಜಾಗತೀಕರಣದ ಕೂಪದಲ್ಲಿ ನಮ್ಮವರೂ ಬಿದ್ದರು. ದೇಶದ ಮಾರುಕಟ್ಟೆಗೆ ಜಗತ್ತಿನ ಎಲ್ಲಾ ದೇಶಗಳ ಸರಕು ಬಂದಿಳಿಯಿತು. ಈ ಅಂತರರಾಷ್ಟ್ರೀಯ ಪೈಪೋಟಿಯನ್ನು ಭಾರತದ ಬಡ ರೈತ ಎದುರಿಸುವುದಾದರೂ ಹೇಗೆ. ಇದು ಸಾಲದೆಂಬಂತೆ ಕಳಪೆ ಬಿತ್ತನೆ ಬೀಜಗಳು. ನಮ್ಮ ರಾಜಕಾರಣಿಗಳ ಭ್ರಷ್ಟಾಚಾರ, ನಕಲಿ ಔಷಧಿಗಳು ಇವೆಲ್ಲ ಸೇರಿ ರೈತನ ಬೆಳೆ ನೆಲಕಚ್ಚಿತು. ಕೆಲವು ಭಾಗದ ರೈತರು ಈ ರೀತಿ ಹಾಳಾದರೆ. ಇನ್ನು ಕೆಲವರು ರಬ್ಬರ್, ವೆನಿಲಾ ಎಂದು ತಮ್ಮ ತೋಟಗಳನ್ನು ಬಲಿಕೊಟ್ಟರು. ಈಗ ಮತ್ತೆ ಸಾವಯವ ಕೃಷಿಯತ್ತ ರೈತ ಸಾಗಬೇಕಾದ ತುರ್ತು ಅವನಲ್ಲಿ ಕಂಡುಬಂದಿದೆ. ಮೇಲಿನ ಸಮಸ್ಯೆಗಳಿಂದ ಬುದ್ಧಿ ಕಲಿತ ರೈತ ಚೇತರಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಎಸ್.ಇ.ಜೆಡ್ (ವಿಶೇಷ ಆರ್ಥಿಕ ವಲಯ) ಎಂಬ ಭೂತ ಬಂದು, ಉದ್ಯಮಗಳಿಗಾಗಿ ರೈತರ ಭೂಮಿಯನ್ನು ಕಸಿದುಕೊಳ್ಳುವ ಕಾರ್ಯ ಶುರುವಾಗಿದೆ. ಪ್ರತಿಭಟನೆಗಿಳಿದರೆ ಗ್ರಹಚಾರ ನೆಟ್ಟಗಿರದೆಂದು ರೈತರಿಗೆ ಪಶ್ಚಿಮ ಬಂಗಾಳದ ನಂದಿಗ್ರಾಮ ಹತ್ಯಾಕಾಂಡ ತಿಳಿಸುತ್ತದೆ. ಹದಿನಾರು ರೈತರನ್ನು ಗೋಲಿಬಾರಿನ ಹೆಸರಿನಲ್ಲಿ ಹತ್ಯೆಮಾಡಲಾಯಿತು. ಅದೆಲ್ಲಕ್ಕಿಂತಲೂ ಆಶ್ಚರ್ಯ ಸಂಗತಿಯೆಂದರೆ ಈ ಹತ್ಯಾಕಾಂಡ ನಡೆಸಿದ್ದು ಬೇರೆ ಯಾವ ಸರ್ಕಾರವೂ ಅಲ್ಲ, ಸದಾ

ಬಡವರ, ಕಾರ್ಮಿಕರ, ರೈತರ ಸಂಗಾತಿ, ಅವರಿಗಾಗಿಯೇ ನಾವು ಅಸ್ತಿತ್ವದಲ್ಲಿದ್ದೇವೆ ಎಂದು ಡೋಂಗಿ ಹೊಡೆಯುವ ಕಮ್ಯುನಿಸ್ಟ್ ಸರ್ಕಾರ. ಇನ್ನು ಬೇರೆ ಸರ್ಕಾರಗಳು ಯಾವ ಮಟ್ಟಕ್ಕೆ ಇಳಿಯಬಹುದು ಎಂದು ಊಹಿಸಬಹುದು.

ರೈತನ ಈ ಎಲ್ಲ ಪತನಗಳ ಮೂಲ ಬುನಾದಿ ಆರಂಭದಿಂದಲೂ ನಡೆದುಕೊಂಡು ಬಂದಿರುವ ದಬ್ಬಾಳಿಕೆ. ಅದಕ್ಕೇ ಒಗ್ಗಿಕೊಂಡಿರುವ ರೈತ ಪ್ರತಿಭಟಿಸುವದನ್ನೇ ಮರೆತಿದ್ದಾನೆ. ಕಾರಣ ಶ್ರೇಣೀಕೃತ ಸಮಾಜದಲ್ಲಿ ಬ್ರಾಹ್ಮಣರನ್ನು ಹೊರತು ಬೇರೆಯವರಿಗೆ ಅಕ್ಷರ ಕಲಿಕೆಯ ಅವಕಾಶವಿಲ್ಲದೇ ಇದ್ದದ್ದು. ಜ್ಞಾನದ ಸಂಪರ್ಕವೇ ಇಲ್ಲದ ರೈತ, ಕಲಿತ ಪುರೋಹಿತಶಾಹಿಗಳ ಕುತಂತ್ರಗಳನ್ನು ಅರಿಯಲಾರದೆ ಹೋದನು. ಅವರು ಉಸುರಿದ್ದನ್ನೇ ಸತ್ಯ ಎಂದು ನಂಬಿ ಶ್ರೇಣೀಕೃತ ವ್ಯವಸ್ಥೆಯನ್ನು ತನಗರಿಯದೆಯೇ ಒಪ್ಪಿಕೊಂಡನು. ಈ ಮೂಲಕ ಶತಮಾನಗಳ ಮನೋದಾಸ್ಯದ ಸಂಕೋಲೆಗೆ ತನ್ನನ್ನು ತಾನೇ ಒಪ್ಪಿಸಿಕೊಂಡನು.

ಜ್ಞಾನದ ದೇಗುಲಗಳಾಗಬೇಕಾಗಿದ್ದ ಗುಡಿಗಳು ಪುರೋಹಿತರ ಕಪಿ ಮುಷ್ಠಿಯಲ್ಲಿ ಸಾಮಾನ್ಯರ ಶೋಷಣೆಯ ಕೇಂದ್ರಗಳಾದವು. ಮೌಢ್ಯ ಹಂಚುವ ತಾಣಗಳಾದವು. ಆದ್ದರಿಂದಲೇ ಕುವೆಂಪುರವರು ಗುಡಿಗಳನ್ನು ಇಡಿಯಾಗಿ ನಿರಾಕರಿಸಿದರು. ಜಲಗಾರ ಗುಡಿಗೆ ಹೋಗಲು ನಿರಾಕರಿಸುವುದರ ಜೊತೆಗೆ ಗುಡಿಗಳ ಅಸ್ತಿತ್ವವನ್ನೇ ಪ್ರಶ್ನಿಸುತ್ತಾನೆ.

## ೧. ೩ ವರ್ಣಾಶ್ರಮದ ಕುರಿತ ಅಸಮಾಧಾನ

ಪುರೋಹಿತಶಾಹಿಯ ಅತಿದೊಡ್ಡ ತಂತ್ರವೆಂದರೆ ಜಾತಿ ಪದ್ಧತಿ. ಕರ್ಮಗಳ ಆಧಾರದ ಮೇಲೆ ಜಾತಿಗಳನ್ನು ಸೃಷ್ಟಿಸಿ, ಸಮಾಜವನ್ನು ತುಂಡರಿಸಲಾಯಿತು. ಪುರೋಹಿತ ವರ್ಗ ತನಗೆ ಬೇಕಾದ ನಿಯಮಗಳನ್ನು ಸೃಷ್ಟಿಸಿ ಎಲ್ಲರ ಮೇಲೂ ಪ್ರಭುತ್ವ ಸಾಧಿಸಿತು. ಕರ್ಮದ ಆಧಾರದ ಮೇಲೆ ಪ್ರಮುಖವಾಗಿ ನಾಲ್ಕು ಜಾತಿಗಳನ್ನು ಸೃಷ್ಟಿಸಲಾಯಿತು.

೧. ಬ್ರಾಹ್ಮಣ
೨. ಕ್ಷತ್ರಿಯ
೩. ವೈಶ್ಯ
೪. ಶೂದ್ರ

ಈ ವಿಂಗಡಣೆಯನ್ನು ಬ್ರಾಹ್ಮಣ ವರ್ಗದ ಜನ ಮಾಡಿದ ಕಾರಣ ಅವರೇ ಎಲ್ಲರಿಗಿಂತ ಮೇಲಿನ ಸ್ಥಾನವನ್ನು ಉಳಿಸಿಕೊಂಡರು. ತಾವು ದೈವಾಂಶ ಸಂಭೂತರೆಂದೂ, ತಮ್ಮದು ಅತಿ ಶ್ರೇಷ್ಠ ಜನ್ಮವೆಂದೂ, ಉಳಿದವರೆಲ್ಲರೂ ಬ್ರಾಹ್ಮಣರ ಅಡಿಯಾಳಾಗಿ ಬಾಳಬೇಕೆಂದೂ ನಿಯಮಗಳನ್ನು ರೂಪಿಸಿದರು. ಇದಕ್ಕೆ ಅನುಗುಣವಾಗಿ ಶಾಸ್ತ್ರಗಳನ್ನು, ಪುರಾಣಗಳನ್ನು ಸೃಷ್ಠಿಸಿದರು. ಅಂತೆಯೇ ಮೊದಲೇ ಅಸ್ತಿತ್ವದಲ್ಲಿದ್ದ ಗ್ರಂಥಗಳಲ್ಲಿ ಪ್ರಕ್ಷಿಪ್ತಗಳನ್ನು

ಸೇರಿಸಿದರು. ವೇದಗಳನ್ನು ತಿರುಚಿ ವ್ಯಾಖ್ಯಾನಿಸಿದರು. ಇವೆಲ್ಲವುಗಳಿಗೆ ಆಧಾರವಾಗಿ 'ಮನುಸ್ಮೃತಿ' ಎಂಬ ಸ್ವಜನ ಪಕ್ಷಪಾತ ಕೃತಿಯನ್ನು ಒದಗಿಸಿದರು.

'ಮನುಸ್ಮೃತಿ'ಯಲ್ಲಿ ಈ ವರ್ಣ ವ್ಯವಸ್ಥೆಯ ಎಲ್ಲ ನಿಯಮಗಳನ್ನೂ ವಿವರಿಸಲಾಗಿದೆ. ಜೊತೆಗೆ ಈ ನಿಯಮಗಳನ್ನು ಪಾಲಿಸದವರ ವಿರುದ್ಧ ತೆಗೆದುಕೊಳ್ಳಬೇಕಾದ ಕ್ರಮ, ಶಿಕ್ಷೆಗಳನ್ನು ವಿವರಿಸಲಾಗಿದೆ. ಅದರಲ್ಲಿರುವ ಕೆಲವು ನಿಯಮಗಳಂತು ಮನುಕುಲವೇ ನಾಚಬೇಕು ಅಷ್ಟು ಅಮಾನವೀಯವಾಗಿವೆ. ಅದರಲ್ಲಿನ ಕೆಲವು ಶ್ಲೋಕಗಳನ್ನು ನೋಡಬಹುದು.

**ಮರ್ಯಾದೆ ಕುರಿತ ಶ್ಲೋಕ**

*"ಬ್ರಾಹ್ಮಣ ದಶವರ್ಷಂ ತುಂ ಶತವರ್ಷ ತು ಭೂಮಿಷಂ*

*ಪಿತಾಪುತ್ರಾ ವಿಜಾನೀಯಾದ್ಬ್ರಾಹ್ಮಣಸ್ತು ತಯೋ: ಪಿತಾ*

*(ಅಧ್ಯಾಯ - ೨, ಶ್ಲೋಕ - ೧೩೫)*

*-ಬ್ರಾಹ್ಮಣನು ಹತ್ತು ವರ್ಷ ವಯಸ್ಸಿನವನಾದರೂ,*

*ನೂರು ವರ್ಷ ವಯಸ್ಸಿನ ಭೂಮಿಪನಿಗೆ ಪಿತೃಸಮಾನನು. ಇದು ಜಾತಿ ವ್ಯವಸ್ಥೆಯು. ಅವರಿಬ್ಬರಲ್ಲಿ*

*ಬ್ರಾಹ್ಮಣನೇ ತಂದೆ."* ೧೬

*ಶೂದ್ರರ ಕುರಿತ ಶ್ಲೋಕ*

*" ಚಾಂಡಾಲಶ್ವಪಚಾನಂ ತು ಬಹಿರ್ಗ್ರಾಮಾತ್ಪ್ರತಿಶ್ರಯ:*

*ಅಪಪಾತ್ರಾಶ್ಚ ಕರ್ತವ್ಯ ಧನ ಮೇಷ್ಯಾಂ ಶ್ವಾಗರ್ದಬಮ್*

*(ಅಧ್ಯಾಯ - ೧೦, ಶ್ಲೋಕ - ೫೧)*

*ವಾಸಾಂಸಿ ಮೃತ ಚೇಲಾನಿ ಭಿನ್ನಭಾಂಡೇಷು ಭೋಜನಮ್*

*ಕಾರ್ಷ್ಣಾಯ ಸಮಲಂಕಾರ: ಪರಿವ್ರಾಜನ ಚ ನಿತ್ಯಶ:*

*(ಅಧ್ಯಾಯ - ೧೦, ಶ್ಲೋಕ - ೫೨)*

*-ಊರ ಹೊರಗೆ ಚಾಂಡಾಲಾದಿಗಳ ವಾಸಿಸ್ಥಾನ.*

ಒಳ್ಳೆಯ ಪಾತ್ರೆಗಳನ್ನು ಅವರು ಉಪಯೋಗಿಸಬಾರದು ನಾಯಿ, ಕತ್ತೆ ಅವರ ಸ್ವತ್ತು. ಹೆಣದ ಬಟ್ಟೆ ಅವರ ಉಡುಗೆ. ಒಡೆದ ಓಡಿನಲ್ಲಿ ಊಟ. ಕಬ್ಬಿಣದ ಬಳೆ, ಉಂಗುರ, ತೊಡುಗೆ, ಸದಾ ಸಂಚಾರ." ೧೭

ಈ ರೀತಿಯ ಅಮಾನವೀಯ ಮೌಲ್ಯಗಳುಳ್ಳ ಕೃತಿಯ ಆಧಾರದ ಮೇಲೆ ಜಾತಿ ಪದ್ಧತಿಯನ್ನು ಜಾರಿಗೆ ತರಲಾಯಿತು. ಈ ರೀತಿಯ ನಿರ್ಬಂಧಗಳ ಮೂಲಕ ಬ್ರಾಹ್ಮಣೇತರರಿಗೆ ಜ್ಞಾನಾರ್ಜನೆಯ ಎಲ್ಲ ಬಾಗಿಲುಗಳನ್ನೂ ಮುಚ್ಚಲಾಯಿತು. ಅಕ್ಷರಾಭ್ಯಾಸದಿಂದ ಹಿಡಿದು ತಪಸ್ಸು ಮಾಡುವುದನ್ನೂ ಕೇವಲ ತಮ್ಮ ವರ್ಗಕ್ಕೇ

ಸೀಮಿತಗೊಳಿಸಿಕೊಳ್ಳಲಾಯಿತು. ಈ ಮನೋಧರ್ಮದ ಹಿನ್ನಲೆಯಲ್ಲಿಯೇ 'ಶೂದ್ರತಪಸ್ವಿ'ಯ ಬ್ರಾಹ್ಮಣ ಶೂದ್ರ ತಪಸ್ಸು ಮಾಡುವುದನ್ನು ವಿರೋಧಿಸುವುದು. ಆದರೆ ಉತ್ತರ ರಾಮಾಯಣದಂತ ಪ್ರಕ್ಷಿಪ್ತದ ರಾಮನಲ್ಲದೇ ಇವನು ಕುವೆಂಪು ಅವರ ಆದರ್ಶ ರಾಮನಾದುದರಿಂದ ಈ ಬ್ರಾಹ್ಮಣನ ಆಟ ಇಲ್ಲಿ ಸಾಗುವುದಿಲ್ಲ.

ಪುರೋಹಿತಶಾಹಿ ವರ್ಗ ತಮ್ಮ ಕಾರ್ಯಸಿದ್ಧಿಗೆ ಸದಾ ಬಳಸುವ ತಂತ್ರವಾದ ಧರ್ಮ ರಕ್ಷಣೆಯ ದಾಳವನ್ನು ಏಸೆಯುತ್ತಾನೆ. ಆದರೆ ಇಲ್ಲಿ ಅದು ಪ್ರಯೋಜನವಾಗುವುದಿಲ್ಲ. ಅವನು ಮಂಡಿಸುವ ವಾದ

"........................

*ಕೃತಯುಗದೊಳ್ ತಪಕ್ಕರ್ಹರ್ ಬ್ರಾಹ್ಮಣರ್ ಮಾತ್ರಂ.*

*ತ್ರೇತೆಯೊಳ್ ಕ್ಷತ್ರಿಯರುಮ್ ಅರ್ಹರ್.*

*ವೈಶ್ಯರುಂ ತಪಂಗೆಯ್ವರು ದ್ವಾಪರದೊಳ್.*

*ಕಲಿಕಾಲಂ ಬರಲ್ ಶೂದ್ರನುಂ ತಪಸ್ವಿ!*

*ಅದು ಕಾರಣದಿಂ*

*ಕೃತಯುಗದೊಳ್ ನಾಲ್ಕು ಕಾಲೊಳ್ ನಿಂತ ಧರ್ಮಂ*

*ತ್ರೇತೆಯೊಳ್ ಮೂಗಾಲಿಯಕ್ಕುಮ್;*

*ದ್ವಾಪರದೊಳ್ ದ್ವಿಪಾದಿ;*

*ಕಲಿಯುಗದೊಳ್ ಒಂಟಿಗಾಲೊಳ್ ಕುಂಟಿ*

*ತತ್ತರಿಸಿ ಸತ್ತುರುಳ್ವುದಾ ವಿಲಯದತ್ತಣ್ಗೇ.-*

*ಕೇಳ್, ವರ್ಣಾಶ್ರಮ ಧರ್ಮಪಾಲಕ,*

*ಪಾಲ್ ಪೂಜ್ಯಮಾದೊಡಂ,*

*ಜೀವಾತುವಾದೊಡಂ,*

*ತ್ಯಾಜ್ಯಮಾ ನಾಯ ಪಾಲ್;*

*ನಾಯ ಪಾಲ್ಗೆಣೆ ಶೂದ್ರನ ತಪಂ!*" [೧೮]

ತಮ್ಮ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳಲು ಪುರೋಹಿತಶಾಹಿಗಳಿಗೆ ಉಳಿದಿದ್ದ ಮಾರ್ಗವೆಂದರೆ ಇತರರಿಂದ ಜ್ಞಾನವನ್ನು ದೂರವಿರಿಸುವುದು. ಅಕಸ್ಮಾತ್ತಾಗಿ ಯಾರಾದರು ಅದನ್ನು ಪಡೆಯಲು ಯತ್ನಿಸಿದರೆ ಅದೇ ಶಾಸ್ತ್ರಗಳನ್ನು ಬಳಸಿ ಅವರ ಕಲಿಕೆಯನ್ನು ಮೊಟಕುಗೊಳಿಸುವುದು. ಉದಾಹರಣೆಗೆ ಮಂತ್ರ ಕೇಳಿಸಿಕೊಂಡ ಶೂದ್ರರ ಕಿವಿಗಳಿಗೆ ಕಾದ ಸೀಸ ಸುರಿಯುವುದು, ಮಂತ್ರ ಉಚ್ಚಾರಣೆ ಮಾಡಿದ ಶೂದ್ರರ ನಾಲಿಗೆ ಕತ್ತರಿಸುವುದು,

ಇತ್ಯಾದಿ. ಆದರೆ ವಸಾಹತುಶಾಹಿಯ ಸಂದರ್ಭದಲ್ಲಿ ಶಾಲೆಗಳು ಎಲ್ಲರಿಗೂ ತೆರೆದಿದ್ದರಿಂದ ಪುರೋಹಿತಶಾಹಿಯ ಹಿಡಿತದಲ್ಲಿದ್ದ ಜ್ಞಾನ ವಿದ್ಯೆಯ ಮೂಲಕ ಎಲ್ಲರಿಗೂ ಲಭಿಸುವಂತಾಯಿತು.

ಉತ್ತರ ರಾಮಾಯಣದ ರಾಮನಂತೆ ಕುವೆಂಪುರ ಶ್ರೀರಾಮ ಪುರೋಹಿತಶಾಹಿಗಳ ಹುನ್ನಾರಕ್ಕೆ ಬಲಿಯಾಗುವುದಿಲ್ಲ. ಏಕೆಂದರೆ ಕುವೆಂಪು ಅವರ ರಾಮ ಜಾತಿ ಪದ್ಧತಿಯನ್ನು ಒಪ್ಪುವುದಿಲ್ಲ. ಅವನು

*"ಈ ವರ್ಣಗರ್ವಾಂಧಂಗೆ,*

*ಈ ಶಾಸ್ತ್ರಮೂರ್ಖಂಗೆತೂ ಬುದ್ಧಿಗಲಿಪೆನ್?"* [೧೯]

ಎಂದು ಪುರೋಹಿತಶಾಹಿಯ ದರ್ಪವನ್ನು ಇಳಿಸುವ ದೃಢ ನಿರ್ಧಾರ ಕೈಗೊಳ್ಳುತ್ತಾನೆ. ಅಂತೆಯೇ ಬ್ರಾಹ್ಮಣನಿಗೆ ಬುದ್ದಿಯನ್ನೂ ಕಲಿಸುತ್ತಾನೆ. ಬ್ರಾಹ್ಮಣ ಕಡೆಯಲ್ಲಿ ಪರಿವರ್ತನೆಗೊಂಡು ಸರಿದಾರಿಯಲ್ಲಿ ಸಾಗುತ್ತಾನೆ. ಆದರೆ 'ಜಲಗಾರ'ನಲ್ಲಿ ಬರುವ ಹಾರುವ ಮಾತ್ರ ತನ್ನ ಸನಾತನ ವಾದಕ್ಕೇ ಅಂಟಿಕೊಳ್ಳುತ್ತಾನೆ. ಪ್ರತಿಭೆ ಕೇವಲ ತಮ್ಮ ವರ್ಗಕ್ಕೇ ಸೀಮಿತ ಎಂದು ವಾದಿಸುತ್ತಾನೆ. ಇಂಪಾಗಿ ಹಾಡಿದ ಜಲಗಾರನ ಹಾಡನ್ನು ದೂರದಿಂದ ಕೇಳಿಸಿಕೊಂಡ ಹಾರುವರು ಮೊದಲಿಗೆ,

" **ಮೊದಲನೆಯ ಪಾರ್ವ**

*ಕೊಳಲಿನಿನಿದನಿಯಂತೆ ಸವಿಗೊರಲಿನಿಂದೊಗೆದ*

*ಗಾಯನವದೆನಿತಿಂಪು! ಹಾಡಿದವರಾರೋ?*

**ಎರಡನೆಯ ಪಾರ್ವ**

*ಯಾರೊ ದಿವ್ಯಾತ್ಮನಿರಬೇಕು. ಮಧುರತಮ*

*ಗಾಯನವು ಅಮಲತಮ ಹೃದಯದಿಂದಲ್ಲದೆ*

*ಹೊರಹೊಮ್ಮಲರಿಯದು! ಗುಡಿಯ ಬಳಿಯಾದರೂ*

*ಹಾಡಿದನೆ!"* [೨೦]

ಎಂದು ಆಸ್ವಾದಿಸುತ್ತಾರೆ. ಅಲ್ಲಿ ಅವರು ಎದುರು ನೋಡಿದ ದಿವ್ಯಾತ್ಮರು ಯಾರೂ ಕಾಣದೆ ಜಲಗಾರನನ್ನು ಹಾಡಿದವರು ಯಾರೆಂದು ಕೇಳುತ್ತಾರೆ. ಅದಕ್ಕೆ ಜಲಗಾರನು ತಾನೇ ಹಾಡಿದ್ದು ಎಂದಾಗ, ಪುರೋಹಿತಶಾಹಿ ಮನೋಧರ್ಮಗಳು ಅದನ್ನು ಒಪ್ಪಲು ಎಳ್ಳಷ್ಟೂ ಸಿದ್ಧರಿರುವುದಿಲ್ಲ.

" **ಎರಡನೆ ಪಾರ್ವ**

*ಅವನಂತೆ! ಬರಿಯ ಸಟೆ! ಹೋಗೋಣ ಬಾ.*

**ಮೊದಲನೆಯ ಪಾರ್ವ**

*ಸಂಗೀತವೆನಿತೇನು ಮನಮೋಹಿಪಂತೆ*

*ಇರಲಿಲ್ಲ. ಗಾನದೇವಿಯು ಹೀನ ಜಲಗಾರನನ್*

*ಒಲಿಯುವಳೆ? ಎಂದಿಗೂ ಇಲ್ಲ.*

***ಎರಡನೆಯ ಪಾರ್ವ***

*ಶೂದ್ರರೋಳ್*

*ಕವಿವರ್ಯರುದಿಸುವರೆ? ಹುಟ್ಟುವರೆ ಪಂಡಿತರ್?*

*ಜನಿಸುವರೆ ಶಿಲ್ಪಿಗಳ್? ಗಾಯಕರ್? ಯೋಗಿಗಳ್?*

*ಅಸದಳಂ ಹೊತ್ತಾಯ್ತು ಹೋಗೋಣ"* [20]

ಎಂದು ಅಲ್ಲಿಂದ ಹೊರಡುತ್ತಾರೆ. ಅಂದರೆ ಅವರ ವಾದವಿಷ್ಟೆ, ಪ್ರತಿಭೆಯೆಂಬುದು ಕೇವಲ ಅವರಿಗೆ ಮಾತ್ರ ಸೀಮಿತ. ಅವರ ವಾದವೂ ಒಂದು ರೀತಿಯಲ್ಲಿ ಸರಿಯೆ! ಏಕೆಂದರೆ ಅವರಿಗೆ ಚೆನ್ನಾಗಿಗೊತ್ತು ಅಕ್ಷರ, ಸಂಗೀತ, ಸಾಹಿತ್ಯ, ಇತ್ಯಾದಿಗಳನ್ನು ಅವರು ತಮ್ಮ ಮಡಿ ಬಟ್ಟೆಗಳ ಮರೆಯಲ್ಲಿ ತಮಗೆ ಮಾತ್ರ ಎಟುಕುವಂತೆ ಭದ್ರಮಾಡಿದ್ದಾರೆ. ಇದು ಬೇರೆಯವರಿಗೆ ಲಭಿಸುವುದು ಕಷ್ಟಸಾಧ್ಯ. ಆದರೆ ಅವರೆಂದುಕೊಂಡಂತೆ ಪ್ರತಿಭೆ ಹುಟಿನಿಂದಲೇ ಬರುವ ಬಳುವಳಿಯಲ್ಲ, ಅವಕಾಶ ದೊರೆತರೆ ಯಾರು ಬೇಕಾದರು ಪರಿಶ್ರಮದಿಂದ ಯಾವೊಂದು ವಿದ್ಯೆಯನ್ನಾದರೂ ಪಡೆಯಬಹುದು. ಆದರೆ ಮುಖ್ಯ ಅವಕಾಶ ಕಲ್ಪಿಸಬೇಕಷ್ಟೆ. ಜಾತಿ ಪದ್ದತಿಯ ಈ ಕ್ರೂರ ಸಮಾಜದಲ್ಲಿ ಬ್ರಾಹ್ಮಣೇತರರಿಗೆ ಈ ಅವಕಾಶಗಳು ಶತಮಾನಗಳ ಕಾಲ ಮರೀಚಿಕೆಯಾಗಿದ್ದವು.

ಅದೇ ಮನಸ್ಥಿತಿಗಳು, ಇಂದಿಗೂ ಸಕ್ರಿಯವಾಗಿರುವುದನ್ನು ನಾವು ಕಾಣಬಹುದು. ಉದ್ಯೋಗ, ವಿದ್ಯಾಭ್ಯಾಸದಲ್ಲಿ ಮೀಸಲಾತಿಯನ್ನು ಇಂದಿಗೂ ಪುರೋಹಿತ ವರ್ಗ ಒಪ್ಪುವುದಿಲ್ಲ. ಪ್ರತಿಭೆಗೇ ಮಾನ್ಯತೆ ಕೊಡಬೇಕೆಂದು ಹುಯಿಲೆಬ್ಬಿಸುತ್ತಾರೆ. ಆದರೆ ಶತಮಾನಗಳಿಂದ ಅಕ್ಷರ ವಂಚಿತರು, ಈ ಕುತಂತ್ರಿಗಳ ಜೊತೆ ಸರಿಸಮಾನವಾಗಿ ಸೆಣಸುವುದಾದರೂ ಹೇಗೆ? ಇವರ ಈ ಮನೋಧರ್ಮದ ಇತ್ತೀಚಿನ ಉದಾಹರಣೆಯೆಂದರೆ, ಹಿಂದುಳಿದ ವರ್ಗಗಳ ಮೀಸಲಾತಿಯ ವಿರುದ್ಧದ ಅವರ ಹೋರಾಟ. ಕೇವಲ ಶೇಕಡ ಹದಿನೈದರಷ್ಟಿರುವ ಜನ ಸುಮಾರು ಶೇಕಡ ಎಪ್ಪತ್ತರಷ್ಟು ಸೌಲಭ್ಯಗಳನ್ನು ನುಂಗುತ್ತಾ ಬಂದಿದ್ದು, ಅದಕ್ಕೆ ಕಡಿವಾಣ ಬೀಳಲಿದೆ ಎಂದು ತಿಳಿದಾಗ ಅದನ್ನು ಅವರು ಸಹಿಸಲಾರದೆ ಹೋಗುತ್ತಾರೆ. ತಮ್ಮ ಶತಮಾನಗಳ ಏಕಸ್ವಾಮ್ಯವನ್ನು ಕಾಪಾಡಿಕೊಳ್ಳಲು ಶತಾಯಗತಾಯ ಹೆಣಗಾಡುತ್ತಾರೆ. ಅವರಿಗೆ ನೆರವಾಗಲು ಅದೇ ವರ್ಗದ ಆಗರ್ಭ ಶ್ರೀಮಂತರು ತುದಿಗಾಲಲ್ಲಿ ನಿಂತಿರುತ್ತಾರೆ. ಇದನ್ನು ನಾವು ಈ ಹಿಂದುಳಿದ ವರ್ಗಗಳ ಮೀಸಲಾತಿ ವಿರೋಧಿ ಗಲಭೆಗಳಲ್ಲಿ ಕಾಣಬಹುದು. ಉಚ್ಚ ವರ್ಗಕ್ಕೆ ಸೇರಿದ ಆಗರ್ಭ ಶ್ರೀಮಂತ ವ್ಯಕ್ತಿಗಳು ಸರ್ಕಾರದ ಮೇಲೆ ತಮ್ಮ ನಿಲುವುಗಳನ್ನು ಬದಲಿಸಲು ನಿರಂತರ ಒತ್ತಡ ತರುವ ಯತ್ನ ಮುಂದುವರಿಸಿಕೊಂಡು ಬಂದಿದ್ದಾರೆ.

ಇಲ್ಲಿ ಕುವೆಂಪು ಸ್ವತ: ಶೂದ್ರರಾಗಿ ಸಾಧಕರಾಗಿರುವುದರಿಂದ, ಪುರೋಹಿತ ವರ್ಗದ ನಿಲುವುಗಳನ್ನು ವ್ಯಂಗ್ಯಕ್ಕೆ ಗುರಿಪಡಿಸಿದ್ದಾರೆ. ಸ್ವಂತ: ತಾವು ತಮ್ಮ ಜೀವನದಲ್ಲಿ ಅನುಭವಿಸಿದ ಅವಮಾನಗಳನ್ನೇ ಇಲ್ಲಿ ಕುವೆಂಪು ತಮ್ಮ ಕೃತಿಯಲ್ಲಿ ತಂದು, ಹುಟ್ಟಿಗೂ ಪ್ರತಿಭೆಗೂ ಸಂಬಂಧ ಕಲ್ಪಿಸುವ ಮನಸ್ಸುಗಳನ್ನು ಜರಿದಿದ್ದಾರೆ. ಇದು

ಸಾಧ್ಯವಾದದ್ದು ಕುವೆಂಪು ಸ್ವತ: ಸಾಧಕರಾಗಿ ತೋರಿಸಿದ್ದರಿಂದ. ಮುಂದೆ ಈ ಏಕಸಾಮ್ಯವನ್ನು ಮುರಿಯುವಲ್ಲಿ ಆಧುನಿಕ ಶಿಕ್ಷಣ ವ್ಯವಸ್ಥೆ ಬಹುಮುಖ್ಯ ಪಾತ್ರ ವಹಿಸಿತು.

'ಬೆರಳ್ ಗೆ ಕೊರಳ್' ನಾಟಕಲ್ಲಿನ ಏಕಲವ್ಯ ಕೂಡ ಗುರುವಿನ ಅಲ್ಪ ಸಂಪರ್ಕದ ನಡುವೆಯೂ ಅರ್ಜುನನಿಗಿಂತಲೂ ಉತ್ತಮ ಬಿಲ್ಲುಗಾರನಾಗಿ ಹೊರಹೊಮ್ಮುತ್ತಾನೆ. ಜಲಗಾರನ ಪ್ರತಿಭೆಯನ್ನು ನಿರಾಕರಿಸುವ ಮನೋಧರ್ಮ ಇಲ್ಲಿ ಏಕಲವ್ಯನ ಪ್ರತಿಭೆಯನ್ನು ಅವನ ಹೆಬ್ಬೆರಳನ್ನು ಬಲಿತೆಗೆದುಕೊಳ್ಳುವ ಮೂಲಕ ನಾಶಮಾಡುವಲ್ಲಿ ತಾತ್ಕಾಲಿಕವಾಗಿ ಯಶಸ್ವಿಯಾಗುತ್ತದೆ. ಆದರೆ ಪ್ರತಿಭೆಯನ್ನು ಶಾಶ್ವತವಾಗಿ ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಹಾಗೆಯೇ ಶ್ರೇಣೀಕೃತ ಸಮಾಜದಲ್ಲಿನ ಶೋಷಣೆಗೆ ಒಂದು ಕೊನೆಯಂತೂ ಇದ್ದೇ ಇದೆ. ಆ ಕೊನೆ ಏನಿರಬಹುದೋ? ಬಹುಶ: ಅವರೇ ಹೇಳಿರುವಂತೆ,

*"ಕೊನೆ ದೊರೆಯ ಕೊರಳಿಗಾ ಕೊನೆ ಪುರೋಹಿತನ ಕರುಳ್*

*ಉರುಳಾಗುವಾ ವರೆಗೆ ಸುಖವಿಲ್ಲ ಈ ಧರೆಗೆ!"* ೨೨

ಇಲ್ಲಿಯವರೆಗೆ ಸುಖವಿಲ್ಲವೇನೋ?

## ಆಕರ ಕೃತಿಗಳು

೧. ಕುವೆಂಪು : ೨೦೦೪, ಕುವೆಂಪು ಸಮಗ್ರ ನಾಟಕ, ಸಂ.ಶಿವಾರೆಡ್ಡಿ, ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೩

೨. -ಅದೇ-

೩. -ಅದೇ-ಪುಟ - ೨೪೧

೪. -ಅದೇ-ಪುಟ -೨೪೨

೫. -ಅದೇ-ಪುಟ - ೧೩

೬. -ಅದೇ-ಪುಟ - ೨೧೯

೭. -ಅದೇ-

೮. -ಅದೇ-ಪುಟ - ೧೨

೯. ಸ್ವಾಮಿ ಧರ್ಮತೀರ್ಥ : ೨೦೦೩ (ಮೂರನೆ ಮುದ್ರಣ), ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಅನು: ಭಗವಾನ್, ಮಹಿಮ ಪ್ರಕಾಶನ, ಮೈಸೂರು, ಪುಟ-೧೬೩

೧೦. ಕುವೆಂಪು : ತಿಳಿಸಿಲ್ಲ, ಆಯ್ದ ಕುವೆಂಪು ಕವನಗಳು, ಸಂ. ಸಿ.ಪಿ.ಕೆ, ಚೇತನ ಬುಕ್ ಹೌಸ್, ಮೈಸೂರು, ಪುಟ-೯೪

೧೧. ಕುವೆಂಪು : ೨೦೦೪, ಕುವೆಂಪು ಸಮಗ್ರ ನಾಟಕ, ಸಂ: ಶಿವಾರೆಡ್ಡಿ ಕೆ.ಸಿ.ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೭

೧೨. -ಅದೇ-

೧೩. -ಅದೇ-

೧೪. -ಅದೇ-ಪುಟ-೮

೧೫. ಕುವೆಂಪು : ೨೦೦೪, ಕುವೆಂಪು ಸಮಗ್ರ ಗದ್ಯ - ೨, ಸಂ. ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೦೬೯

೧೬. ಮನುಸ್ಮೃತಿ : ೧೯೯೬ (ಮೂರನೆ ಮುದ್ರಣ), ಅನು: ಚಕ್ರಕೋಡಿ ಈಶ್ವರಶಾಸ್ತ್ರೀ, ಸಮಾಜ ಪುಸ್ತಕಾಲಯ, ಧಾರವಾಡ, ಪುಟ- ೬೯

೧೭. -ಅದೇ-ಪುಟ - ೪೬೦

೧೮. ಕುವೆಂಪು : ೨೦೦೪, ಕುವೆಂಪು ಸಮಗ್ರನಾಟಕ, ಸಂ. ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೨೧೯,೨೨೦.

೧೯. -ಅದೇ-ಪುಟ - ೨೧೩

೨೦. -ಅದೇ-ಪುಟ - ೧೦

೨೧. -ಅದೇ-

೨೨. -ಅದೇ-ಪುಟ - ೧೩.

## ಅಧ್ಯಾಯ - ೨

# ಪುರೋಹಿತಶಾಹಿ ಹುನ್ನಾರಗಳ ಅನಾವರಣ

ಪುರೋಹಿತಶಾಹಿಗಳ ವರ್ಗ ಸಮಾಜದ ಮೇಲಿನ ತಮ್ಮ ಹಿಡಿತವನ್ನು ನಿರಂತರವಾಗಿ ಕಾಯ್ದುಕೊಂಡು ಬರಲು ಸದಾ ಹೊಸ ತಂತ್ರಗಳ ಮೊರೆಹೋಗುತ್ತಲೇ ಇರುತ್ತದೆ. ಏಕೆಂದರೆ ಅವರ ಸ್ಥಾಪಿತ ಸಿದ್ಧಾಂತಗಳು ನೈಜವಲ್ಲದೆ; ಕೃತಕ, ವಂಚಿಸುವ ದೃಷ್ಟಿಯಿಂದ ರೂಪುಗೊಂಡಂತಹವು. ಅವರು ನಿರಂತರವಾಗಿ ಸುಳ್ಳುಗಳ ಸರಮಾಲೆಗಳನ್ನು ಹೆಣೆಯುತ್ತಲೇ ಹೋಗಬೇಕಾಗುತ್ತದೆ. ಹೋಗುತ್ತಿದ್ದಾರೆ. ಇಲ್ಲವಾದರೆ ಅವರ ಕುತಂತ್ರಗಳು ಬಯಲಾಗಿ, ಸಮಾಜದ ಮೇಲಿನ ತಮ್ಮ ಹಿಡಿತ ಸಡಿಲವಾಗುವ ಅಭದ್ರತೆ ಅವರನ್ನು ಕಾಡುತ್ತಲೇ ಇರುತ್ತದೆ. ಪುರೋಹಿತಶಾಹಿಯ ಮುಖ್ಯತಂತ್ರಗಳನ್ನು ಕೆ.ಸಿ.ಶಿವಾರೆಡ್ಡಿ ಗುರುತಿಸಿರುವಂತೆ

"ವರ್ಣವ್ಯವಸ್ಥೆಯ ಮುಖ್ಯ ತಂತ್ರಗಳೆಂದರೆ ಸಾಮಾಜಿಕ ಸ್ಥಾನಮಾನಗಳಿಂದ ಜನಸಾಮಾನ್ಯರನ್ನು ವಂಚಿಸಿದ್ದು, ನಾಗರೀಕ ಹಕ್ಕುಗಳ ದಮನ, ವಿದ್ಯೆಯ ಅವಕಾಶಗಳನ್ನು ತಪ್ಪಿಸಲು ಪ್ರಯತ್ನಿಸಿದ್ದು, ಸ್ತ್ರೀ ಶೋಷಣೆ, ಸಹ ಗಮನ ಪದ್ಧತಿಯ ಜಾರಿ, ಪುರಾಣ, ಮಂತ್ರಗಳನ್ನು ತಪ್ಪಾಗಿ ತಿರುಚಿ ವ್ಯಾಖ್ಯಾನಿಸಿ ಪ್ರಕ್ಷಿಪ್ತಗಳನ್ನು ಸೇರಿಸುವುದು ಮತ್ತು 'ಮನುಸ್ಮೃತಿ'ಯಂಥ ಪಕ್ಷಪಾತ ಪಾತಕಶಾಸ್ತ್ರ ಗ್ರಂಥಗಳಿಂದ ಜನಸಮುದಾಯದಲ್ಲಿ ನಿರಂತರವಾಗಿ ಅಂತರಗಳನ್ನು ಸ್ಥಾಪಿಸಿದ್ದು."[೧]

ಎಂದು ಗ್ರಹಿಸಬಹುದು. ಮೊದಲನೇ ಅಧ್ಯಾಯದಲ್ಲಿ ಜಾತಿ ಪದ್ಧತಿ ಮತ್ತು ದೇವರು, ಗುಡಿ, ಧರ್ಮದ ಹೆಸರಿನಲ್ಲಿ ಪುರೋಹಿತಶಾಹಿ ವರ್ಗ ನಡೆಸಿಕೊಂಡು ಬಂದಿರುವ ನಿರಂತರ ಶೋಷಣೆಯನ್ನು ಕಂಡಿದ್ದೇವೆ. ಈ ಅಧ್ಯಾಯದಲ್ಲಿ ಪುರೋಹಿತಶಾಹಿ ವರ್ಗ ಹೇಗೆ ವರ್ಣ ವ್ಯವಸ್ಥೆಯ ಮೂಲಕ ಹೇಗೆ ವರ್ಗ ವ್ಯವಸ್ಥೆಯನ್ನೂ ಕಾಯಂಗೊಳಿಸಿತು ಎಂಬುದರ ಬಗ್ಗೆ ನೋಡೋಣ. ಜೊತೆಯಲ್ಲಿ ತಮ್ಮ ತಂತ್ರಗಾರಿಕೆಯನ್ನು ಸಫಲಗೊಳಿಸಲು ಆಳುವ ವರ್ಗವನ್ನು ಹೇಗೆ ಬಳಸಿಕೊಂಡರು ಎಂಬ ಅಂಶಗಳನ್ನು ಗಮನಿಸಬಹುದು. ಈ ನೆಲೆಯ ಸಂಘರ್ಷವನ್ನು ಕುವೆಂಪು ಅವರ ನಾಟಕಗಳ ಮೂಲಕ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಸಮಾಜವಾದಿ ಚಿಂತಕ ರಾಮಮನೋಹರ ಲೋಹಿಯಾ ಜಾತಿ ವರ್ಗವನ್ನು ಈ ರೀತಿ ನೋಡಿದ್ದಾರೆ. "ಜಾತಿಯನ್ನು ವರ್ಗದಿಂದ ಬೇರ್ಪಡಿಸುವಂಥದು ಯಾವುದೆಂದರೆ ಜಾತಿಗಳ ಪರಸ್ಪರ ಸಂಬಂಧದಲ್ಲಿ ನುಸುಳಿ ಬಂದಿರುವ ಚಲನರಾಹಿತ್ಯ. ವರ್ಗ ಎಂದರೆ ಚಲನ ಸಾಮರ್ಥ್ಯವುಳ್ಳ ಜಾತಿ, ಜಾತಿ ಎಂದರೆ ಚಲನರಹಿತವಾದ ವರ್ಗ."[೨]

ಜಾತಿ ಅಥವಾ ವರ್ಣ ಮತ್ತು ವರ್ಗಗಳು ಭಾರತದ ಮಟ್ಟಿಗೆ ಒಂದರಲ್ಲೊಂದು ಅಂತರ್ಗತವಾಗಿವೆ. ಈ ಬಗ್ಗೆ ಪ್ರಸ್ತಾವನೆಯಲ್ಲಿಯೂ ಪ್ರಸ್ತಾಪವಾಗಿದೆ. ಆದರೆ ಇದನ್ನು ಹೇಗೆ ಸಫಲವಾಗಿ ನಿರ್ವಹಿಸಿಕೊಂಡು ಬಂದಿರುವರು ಎಂಬುದೇ ಒಂದು ಕುತೂಹಲಕಾರಿ ಅಂಶ.

## ೨.೧ ವರ್ಣ ತಾರತಮ್ಯದ ಮೂಲಕ ವರ್ಗ ತಾರತಮ್ಯವನ್ನು ಬಲಪಡಿಸಿದ್ದು

ವರ್ಣ ವ್ಯವಸ್ಥೆಯಲ್ಲಿ ತಳಭಾಗದಲ್ಲಿರುವವರನ್ನು ಎಲ್ಲ ಕಾಲಕ್ಕೂ ಅಲ್ಲೇ ಇರುವಂತೆ ಮಾಡಲು ಶೂದ್ರರು ಹಣ ಸಂಗ್ರಹಿಸಬಾರದು ಎಂಬ ಕಟ್ಟಳೆಯನ್ನು ರೂಪಿಸಿದರು. ಅದರ ಬಗ್ಗೆ 'ಮನುಸ್ಮೃತಿ'ಯಲ್ಲಿ ಉಲ್ಲೇಖವಿದೆ.

*''ಶಕ್ತೇನಾಪಿ ಹಿ ಶೂದ್ರೇಣ ನ ಕಾರ್ಯೋ ಧನಸಂಚಯಃ!*

*ಶೂದ್ರೋಹಿ ನ ಧನಮಸಾಧ್ಯ ಬ್ರಾಹ್ಮಣಾನೇವ ಭಾಧತೇ.*

*(ಅಧ್ಯಾಯ - ೧೦, ಶ್ಲೋಕ - ೧೨೯)*

*—ಧನಾರ್ಜನ ಸಾಮರ್ಥ್ಯವಿದ್ದರೂ ಶೂದ್ರನು ಹಣ*

*ಸಂಗ್ರಹಿಸಬಾರದು. ಅದು ಆವನಿಗೆ ಬ್ರಾಹ್ಮಣ-*

*ಪೀಡೆಗೆ ಪ್ರೇರಣೆಯಾಗುವುದು''.* [೩]

ಇದರಿಂದ ಉಚ್ಚ ವರ್ಗಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಮಾತ್ರ ಸಂಪತ್ತು ಕ್ರೂಡೀಕರಿಸಲ್ಪಟ್ಟಿತು. ಬಡವರು ಬಡವರಾಗೆ ಉಳಿದರು. ಶ್ರೀಮಂತರು ಆಗರ್ಭ ಶ್ರೀಮಂತರಾಗುವತ್ತ ಸಾಗಿದರು. ಅದೇ ಮುಂದೆ ವರ್ಗ ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿತು. ಇದರಿಂದ ಆರ್ಥಿಕ ಶೋಷಣೆ ಆರಂಭವಾಯಿತು. ವರ್ಗ ಸಂಘರ್ಷದ ನೆಲೆಯನ್ನು ಕುವೆಂಪುರವರು ತಮ್ಮ 'ಬೆರಳ್ ಗೆ ಕೊರಳ್' ನಾಟಕದಲ್ಲಿ ಅದ್ವಿತೀಯವಾಗಿ ತಂದಿದ್ದಾರೆ. ವ್ಯಾಧನಾದ ಏಕಲವ್ಯನು ತನ್ನವರಿಗೆ ನಿಷಿದ್ಧವಾಗಿದ್ದರೂ ಬಿಲ್ವಿದ್ಯೆಯನ್ನು ತನ್ನ ಪರಿಶ್ರಮದಿಂದಲೇ ಕಲಿಯಲು ಶಕ್ತನಾಗುತ್ತಾನೆ. ನಡುವೆ ಅರ್ಜುನನೊಂದಿಗಿನ ಅವನ ಮುಖಾಮುಖಿಯ ಹಂತ ಬಹಳ ಸ್ವಾರಸ್ಯಕರವಾಗಿ ಮೂಡಿಬಂದಿದೆ.

ಏಕಲವ್ಯ ಶಬ್ದವೇಧಿ ವಿದ್ಯೆಯಲ್ಲಿ ಪರಿಣತಿಯನ್ನು ಪಡೆದಿದ್ದಾನೆ. ಅದೇ ವಿದ್ಯೆನ್ನು ಬಳಸಿ ದೂರದಲ್ಲಿದ್ದ ಒಂದು ಹಂದಿಯನ್ನು ಹೊಡೆದುರುಳಿಸಿದ್ದಾನೆ. ಅದನ್ನು ನೋಡಲು ಹೋದಾಗ ಆ ಹಂದಿಯ ಬಳಿ ಅರ್ಜುನ ನಿಂತಿರುತ್ತಾನೆ. ಅವನು ಏಕಲವ್ಯನನ್ನು ಕಂಡು

*''..............ವನಚರ,*

*ಆರ್ ಎಚ್ಚರೀ ವರಾಹಮನ್?''* [೪]

*ಎಂದು ಕೇಳುತ್ತಾನೆ. ಅದಕ್ಕೆ ಏಕಲವ್ಯನು,*

*''ನಾಗರೀಕ, ಓದಿ ತಿಳಿ;*

*ಕಲಿಪುದಾ ಬಾಣಕ್ಷರಂ!''* [೫]

ಎಂದು ನಾಗರೀಕರಾದ ನೀವು ಅಕ್ಷರ ಕಲಿತವರು ಎಂದು ನೆನಪಿಸುತ್ತಾನೆ. ಆದರೆ ಸಾಮಾನ್ಯ ನಾಗರೀಕರಿಗೇ ಆದಿವಾಸಿಗಳನ್ನು, ಅನಕ್ಷರಸ್ತರನ್ನು ತುಚ್ಛವಾಗಿ ಕಾಣುವ ಚಟವಿರುವಾಗ ಇನ್ನು ಅರ್ಜುನ,

ರಾಜಮನೆತನದವನು ಅವನು ಈ ವನಚರನನ್ನು ಮರ್ಯಾದೆಯಿಂದ ಸಂಭೋಧಿಸುವುದುಂಟೆ. ಅವನು ಪುಸಿ ನಗೆ ನಕ್ಕು

*" ಆರೋ ನೀನ್"* [೬]

*ಎಂದು ಕೇಳುತ್ತಾನೆ. ಅದಕ್ಕೆ ಏಕಲವ್ಯ*

*"ನೀನೆ ಸಂಬೋಧಿಸಿದವೊಲ್ ವನಚರನ್!"* [೭]

ಎಂದು ಉತ್ತರವೀಯುತ್ತಾನೆ. ಇದರಿಂದ ಅರ್ಜುನ ಕೆರಳುತ್ತಾನೆ. ಒಬ್ಬ ವನಚರ ಈ ಅರ್ಜುನನ ಮುಂದೆ ಈ ಮಟ್ಟದ ದರ್ಪವನ್ನು ಪ್ರದರ್ಶಿಸುವುದೆ? ಎಂಬ ಕೋಪ ಅವನಿಗೆ.

*"ನಾಲಿಗೆಯ ನೆರಂ ಬೇಕೆ?*

*ನಿನ್ನಿರ್ಕೆಯ ಪೇಳ್ದಪುದದನ್,*

*ನಿನ್ನ ಕೈರಾತ್ಯಮಂ!*

*ನಾನ್ ಕೇಳ್ದುದು ನಿನ್ನ ಪೆಸರನ್.*

*ಅನಾಮನೇನ್ ನೀನ್?"* [೮]

ಎಂದು ಕೇಳುತ್ತಾನೆ. ತಮ್ಮ ಹೆಸರಿಗೆ ಇಲ್ಲ ಸಲ್ಲದ ಬಿರುದುಗಳನ್ನು ಬಿಗಿದುಕೊಂಡು ಮೆರೆಯುವುದು ನಾಗರೀಕ ಸಮಾಜ ಅದರಲ್ಲೂ ಆಳುವ ವರ್ಗದ ಒಂದು ದೊಡ್ಡ ಮನದಾಸೆ. ಅಂತೆಯೆ ತಮ್ಮ ಹೆಸರು ಅಜರಾಮರವಾಗಲೆಂದು ನಾಗರೀಕತೆಯನ್ನೇ ನಿರ್ನಾಮ ಮಾಡುವ ಆತಂಕವನ್ನು ಒಡ್ಡುತ್ತಾರೆ. ತಮ್ಮ ಹೆಸರು ಚರಿತ್ರೆಯ ಪುಟಗಳಲ್ಲಿ ಅಚ್ಚಳಿಯದೆ ನಿಲ್ಲುವಂತೆ ಮಾಡಲು ಈ ಭೂಮಿಯ ಮೇಲೆ ಅದೆಷ್ಟು ಯುದ್ಧಗಳು ಘಟಿಸಿದವೋ? ಲೆಕ್ಕಕ್ಕೆ ಸಿಗುವುದೇ ಕಷ್ಟ. ಹಾಗೆಯೇ ತಾವು ತಮ್ಮ ಕೀರ್ತಿಗಳ ಮರೆಯಲ್ಲಿ ತಮ್ಮ ಹೆಸರನ್ನೇ ಮರೆತು, ಅಂದರೆ ತಮ್ಮ ಹಳೆಯದನ್ನೆಲ್ಲ ಮರೆತು ಮೆರೆಯುವವರ ಸಂಖ್ಯೆಯೂ ಸಾಕಷ್ಟಿದೆ.

ಬಿರುದುಗಳ ಹೊರೆ ಹೊರುವುದಕ್ಕಾಗಿ ವಿನಾಕಾರಣ ಇನ್ನೊಬ್ಬರನ್ನು ನಾಶಮಾಡುವುದೂ ನಾಗರೀಕ ಸಮಾಜದಲ್ಲಿ ಸಾಮಾನ್ಯ. ಆದರೆ ಈ ದರ್ಪ, ಮಹತ್ವಾಕಾಂಕ್ಷೆ ಮುಗ್ಧರಾದ ಗಿರಿಜನರಲ್ಲಿ ಮೂಡಲಾರದು. ಏಕೆಂದರೆ ಅವರು ಇದ್ದುದರಲ್ಲೇ ಸುಖ ಅನುಭವಿಸುವ ಮನಸ್ಥಿತಿ ಹೊಂದಿರುವವರು ಆದ್ದರಿಂದಲೇ ಏಕಲವ್ಯ ಹೇಳುವುದು,

*"......... ವನಚರರ್ ಅನಸೂಯಾಶೀಲರ್,*

*ಅರಿಯರ್ ಪೆಸರಂ ಮರೆವ ಅಹಂಕಾರಮಂ,*

*ಪೆಸರಾಸೆ, ಅದೊಂದು ನಾಗರೀಕರ್ಗೆ ಮೀಸಲಾಗಿರ್ಪ*

*ಮನೋಜಾಡ್ಯಂ ಕಣಾ!*

*.............."* [೯]

ಆದರೆ ಈ ಮನೋಜಾಡ್ಯವೇ ನಾಗರೀಕ ಸಮಾಜವನ್ನು ಅತಿಯಾಗಿ ಕಾಡುವುದು. ತನ್ನ ಹೆಸರಿನಲ್ಲಿ ಇಡೀ ಜಗತ್ತು ನಡೆಯಬೇಕೆಂದು ಹಿಟ್ಲರ್ ಇಡೀ ಜಗತ್ತನ್ನೇ ಯುದ್ಧದ ಉರಿಯಲ್ಲಿ ಹೊತ್ತಿ ಉರಿಯುವಂತೆ ಮಾಡುತ್ತಾನೆ. ಅಮೇರಿಕಾದವರು ಕಂಡವರ ವಿಷಯಗಳಲ್ಲಿ ಮೂಗು ತೂರಿಸಿ ಯುದ್ಧಹೂಡುತ್ತಾರೆ. ಇವೆಲ್ಲಕ್ಕೂ ಈ ಮನೋಜಾಡ್ಯವೇ ಕಾರಣ. ಈ ಮನೋಜಾಡ್ಯದ ನಟ್ಟ ನಡುವೆ ನಿಂತಿರುವ ಅರ್ಜುನ ಏಕಲವ್ಯನ ಈ ಮಾತುಗಳಿಂದ ಕೆರಳುತ್ತಾನೆ. ಈ ಕಾಡಿನವನಿಗೆ ಏನು ಬಿಂಕ ಎಂದುಕೊಳ್ಳುತ್ತಾನೆ. ತನ್ನದೊರೆತನದ ಬಿಂಕದಿಂದ ನುಡಿಯುತ್ತಾನೆ.

*"ನಾವಾರೆಂದಿರ್ಪೆ? ಆಳ್ವವರ್! ನೀನಾಳ್!"* [70]

ಆಳುವರ್ಗದ ಮುಂದೆ ಈ ಜನಾಂಗ ಎಂದಿಗೂ ತಲೆ ತಗ್ಗಿಸಿ ನಡೆಯಬೇಕು. ಜೊತೆಗೆ ಅವನನ್ನು ಯಾರೂ ಪ್ರಶ್ನಿಸಬಾರದು. ಅವನು ಮಾಡಿದ್ದೆಲ್ಲವೂ ಸರಿ. ಮುಂತಾದ ಮನೋಜಾಡ್ಯಗಳಿಗೆ ಜೊತು ಬಿದ್ದಿರುತ್ತದೆ. ಇದು ವರ್ಣ ವ್ಯವಸ್ಥೆ ರೂಪಿಸಿರುವ ನೆಲೆ. ವರ್ಣ ವ್ಯವಸ್ಥೆಯಲ್ಲಿ ಮೇಲು ವರ್ಗವನ್ನು ಪ್ರಶ್ನಿಸುವ ಹಕ್ಕು ಕೆಳವರ್ಗದವರಿಗೆ ಇರುವುದಿಲ್ಲ. ಇದು ಮನು ಸ್ಥಾಪಿತ ಕಾನೂನು. ಇದೇ ಮುಂದೆ ವರ್ಗ ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿತು. ಬ್ರಾಹ್ಮಣರು ತಮ್ಮ ಸ್ವಾರ್ಥಕ್ಕೆಂದು ವರ್ಣ ವ್ಯವಸ್ಥೆ ಸೃಷ್ಟಿಸಿದಾಗ ಕ್ಷತ್ರಿಯರಿಗೆ ಎರಡನೇ ಸ್ಥಾನವನ್ನು ದೊರಕಿಸಿಕೊಟ್ಟರು. ಕ್ಷತ್ರಿಯರು ಭೂಪಾಲಕರಾಗಿ ಅರ್ಹತೆ ಪಡೆದುಕೊಂಡರು. ರಾಜ್ಯವಾಳುವುದೇ ಅವರ ಕಾಯಕವಾಗಿ ಸೂಚಿಸಲ್ಪಟ್ಟಿತು. ಈ ರೀತಿ ಕ್ಷತ್ರಿಯರಿಗೆ ಆಳುವ ಅಧಿಕಾರ ಕೊಟ್ಟರೂ ಅವರು ಹಾರುವರಿಗಿಂತ ಕಡಿಮೆ ಎಂದು ಸೂಚಿಸಲಾಯಿತು. ಜೊತೆಗೆ ದೊರೆಗಳನ್ನು ಪುರೋಹಿತ ವರ್ಗದ ಆಶೋತ್ತರಗಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸುವಂತೆ ಶಾಸ್ತ್ರಗಳಲ್ಲಿ ತಿಳಿಸಲಾಯಿತು. ಇದಕ್ಕೆ ಕ್ಷತ್ರಿಯ ವರ್ಗ ಸುಲಭವಾಗಿ ಒಪ್ಪಲು ಮುಖ್ಯ ಕಾರಣ, ಇದರಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ಇವರಿಬ್ಬರ ಒಳಿತೂ ಅಡಗಿತ್ತು. ಆಗೊಮ್ಮೆ ಈಗೊಮ್ಮೆ ಕೆಲ ರಾಜರು ಪುರೋಹಿತರನ್ನು ವಿರೋಧಿಸುವ ಧೈರ್ಯ ತೋರಿದರೂ ಪುರೋಹಿತಶಾಹಿ ಕುತಂತ್ರಗಳ ಮುಂದು ಅವರು ಹೆಚ್ಚು ಪ್ರತಿರೋಧ ಒಡ್ಡಲು ವಿಫಲರಾದರು. ಒಂದೋ ಅವರು ತಮ್ಮ ಸ್ಥಾನ ಕಳೆದುಕೊಂಡು ಪುರೋಹಿತಶಾಹಿಗಳ ಸಮರ್ಥಕರಿಗೆ ಆ ಸ್ಥಾನ ಹೋಯಿತು. ಇಲ್ಲ ಅವರು ಪುರೋಹಿತಶಾಹಿಗಳ ಜೊತೆ ಕೈ ಜೋಡಿಸಿ ಮುನ್ನಡೆಯಬೇಕಾಯಿತು.

ಅರ್ಜುನನೂ ಕ್ಷತ್ರಿಯನಾದ್ದರಿಂದ ಮತ್ತು ಏಕಲವ್ಯ ಕೇವಲ ಒಬ್ಬ ವ್ಯಾಧನಾದ್ದರಿಂದ ಅವನು ತನ್ನ ಗುಲಾಮ ಎಂಬ ಭಾವನೆ ಅರ್ಜುನನಲ್ಲಿತ್ತು. ಜನರ ಹೆಸರಿನಲ್ಲಿ ದೊರೆ ರಾಜ್ಯವಾಳುತ್ತಾನಾದರೂ ಇಡೀ ರಾಜ್ಯ ತನ್ನದೇ ಎಂಬ ಭಾವನೆ ದೊರೆಗಳಲ್ಲಿರುತ್ತದೆ.

ತನ್ನ ಆಡಳಿತದ ಗಡಿಯ ಎಲ್ಲಾ ಭೂಪ್ರದೇಶವೂ ತನಗೇ ಸೇರಿದ್ದು ಎಂಬ ಅಹಂ ಅವರಲ್ಲಿ ತುಂಬಿರುತ್ತದೆ. ಮತ್ತು ಆ ಪ್ರದೇಶದಲ್ಲಿರುವ ಜನರೆಲ್ಲರೂ ತನ್ನ ಅಣತಿಯಂತೆಯೇ ನಡೆಯಬೇಕೆಂಬುದು ಅವರ ಆಶಯ. ಆ

ನೆಲೆಯಲ್ಲಿಯೆ ಅರ್ಜುನ ಇಲ್ಲಿ, ಈ ಪ್ರದೇಶದ ದೊರೆಗಳು ನಾವು, ನೀವು ಪ್ರಜೆಗಳು ಆಳುಗಳು ಎಂಬಂತೆ ಮಾತನಾಡುತ್ತಾನೆ.

ಪ್ರಸ್ತುತ ಸಂದರ್ಭದಲ್ಲಿಯೂ ಈ ಮನೋಧರ್ಮ ಮುಂದುವರಿದುಕೊಂಡು ಬಂದಿದೆ. ವ್ಯತ್ಯಾಸವೆಂದರೆ ಈಗ ಪುರೋಹಿತಶಾಹಿಗಳೂ ಅಧಿಕಾರವನ್ನು ಹಿಡಿಯಲಾರಂಭಿಸಿದ್ದು, ಪುರೋಹಿಶಾಹಿಗಳ ಕುತಂತ್ರ ಮತ್ತು ಕ್ಷತ್ರಿಯ ಮನೋಧರ್ಮದ ಹಿಂಸಾತ್ಮಕ ನಡವಳಿಕೆಗಳು ಒಂದಾಗಿ ಮೂಡಲಾರಂಭಿಸಿವೆ. ಆ ಹಿನ್ನಲೆಯಲ್ಲಿ ನಾವು ಇತ್ತೀಚಿನ ವರ್ಷಗಳಲ್ಲಿ ಗುಜರಾತಿನಲ್ಲಿ ನಡೆದು ಕೋಮುಗಲಭೆಗಳನ್ನು ನೋಡಬೇಕಾಗಿರುವುದು. ಆಳುವ ವರ್ಗದಲ್ಲಿ ಪುರೋಹಿತಶಾಹಿಯ ಮನಸ್ಸು, ಪುರೋಹಿತಶಾಹಿಯ ಜೊತೆ ಅಧಿಕಾರಸ್ಥ ಚಿಂತನೆಗಳು ತಲೆದೋರಿ ಒಂದರಲ್ಲೊಂದು ಬೆರೆತು ಅಧಿಕಾರ ವರ್ಗ, ಪುರೋಹಿತಶಾಹಿ ವರ್ಗ ಒಂದೇ ವರ್ಗವಾಗಿ ಹೊರಹೊಮ್ಮಿದೆ. ಶತಮಾನಗಳ ಕಾಲ ಶೋಷಣೆಯ ಬೆಂಕಿಯಲ್ಲಿ ಬೆಂದು ಈಗಷ್ಟೇ ಅಲ್ಲೊಬ್ಬರು, ಇಲ್ಲೊಬ್ಬರು ದಲಿತರು ಅಧಿಕಾರಕ್ಕೆ ಬರುತ್ತಿದ್ದಾರೆ. ಆದರೆ ಅದರಲ್ಲಿ ಕೆಲವರು ಅವರ ವರ್ಗದ ಮೇಲೇ ಶೋಷಣೆಗೈದ ಮನಸ್ಸುಗಳ ಜೊತೆಗೇ ಕೈ ಜೋಡಿಸಿ ಸಮಗ್ರ ಹಿಂದೂ ಸಮಾಜದ ಹೆಸರಿನಲ್ಲಿ ಕೋಮುವಾದವನ್ನು ಬೆಂಬಲಿಸುತ್ತಿದ್ದಾರೆ. ಅಂದರೆ ಅಧಿಕಾರದ ಅಮಲಿನಲ್ಲಿದ್ದರೆ ಯಾವುದೇ ವರ್ಗವೂ ಸಹ ಅದನ್ನು ಚಲಾಯಿಸಲು ಹಿಂದೆ ಸರಿಯುವುದಿಲ್ಲ. ಅಧಿಕಾರಕ್ಕೆ ಧಕ್ಕೆ ಬಂದಾಗ ದೇಶದ ಹಿತಾಸಕ್ತಿಯನ್ನೇ ಬಲಿಕೊಟ್ಟು ಯಾರೊಂದಿಗಾದರೂ ಕೈ ಜೋಡಿಸಿ ಅಧಿಕಾರ ಉಳಿಸಿಕೊಳ್ಳುವ, ಅಥವಾ ತುರ್ತು ಪರಿಸ್ಥಿತಿಯನ್ನು ಹೇರಿ ಸರ್ವಾಧಿಕಾರಿಗಳಾಗಲು ಹಿಂಜರಿಯುವುದಿಲ್ಲ.

ಇಲ್ಲಿನ ಅರ್ಜುನನೂ ಅಷ್ಟೇ ತನ್ನ ಅಧಿಕಾರದ ದರ್ಪವನ್ನು ಪ್ರದರ್ಶಿಸುತ್ತಾನೆ. ಆದರೆ ಅರ್ಜುನನ ಈ ವಾದವನ್ನು ಏಕಲವ್ಯ ಒಪ್ಪಲು ಸಿದ್ಧನಿಲ್ಲ. ಅವನ ಅಭಿಪ್ರಾಯದಲ್ಲಿ ಅಲ್ಲಿರುವ ಅವನದು ಆ ಅಡವಿ. ಅದಕ್ಕೆ ಅವನೆ ಒಡೆಯ.

*"ನನ್ನಯ್ಯನಿಂದೆನಗೆ ಬಂದಡವಿ ಈ ಪೊಡವಿ.*
*ನನ್ನಯ್ಯನಾದಂ ಬಳಿಂ ನಾನಿಲ್ಲಿಗೊಡೆಯನ್.*
*ನನ್ನಾಜ್ಞೆಯಿಲ್ಲದೆಯೆ ನನ್ನಡವಿಯಂ ಪೊಕ್ಕು*
*ರಕ್ಷೆಯ ಮೃಗಂಗಳಂ ಬೇಟೆಯಾಡುವ ನೀನ್*
*ಕೊಳ್ಳೆಗಾರನ್, ಕಳ್ಳನ್, ದಂಡನಾರ್ಹನ್!*

..................

..................''[೨೨]

ಈ ಅಡವಿ ನನ್ನದೆಂಬುದು ಏಕಲವ್ಯನ ಅಭಿಪ್ರಾಯ ಇಂದು ಜಗತ್ತಿನಾದ್ಯಂತ ಗಿರಿಜನರು ಹೇಳುತ್ತಿರುವುದೂ ಇದನ್ನೆ. ಈ ಕಾಡು ನಮ್ಮದು ಎಂದು. ಅವರನ್ನು ಬಲವಂತದಿಂದ ಅಲ್ಲಿಂದ ಒಕ್ಕಲೆಬ್ಬಿಸುವ ಕೆಲಸ ಆರಂಭವಾಗಿದೆ. ಕಾರಣ ಜಾಗತೀಕರಣ. ಬಲಿಷ್ಟ ರಾಷ್ಟಗಳಿಂದ ಅಭಿವೃದ್ಧಿಯ ಹೆಸರಿನಲ್ಲಿ ಪಡೆಯಲಾದ ಸಾಲಕ್ಕೆ ಬಡದೇಶಗಳು ತಮ್ಮಲ್ಲಿರುವ ಸಂಪತ್ತನ್ನು ತೋರಿಸಬೇಕು. ಆದ್ದರಿಂದ ಸರ್ಕಾರಗಳು ಕಾಡುಗಳನ್ನು ರಾಷ್ಟ್ರೀಯ ಉದ್ಯಾನಗಳೆಂದು ಘೋಷಿಸಿ ಅಲ್ಲಿಂದ ಗಿರಿಜನರನ್ನು ಒಕ್ಕಲೆಬ್ಬಿಸುವ ಕೆಲಸ ಮಾಡುತ್ತಿವೆ. ಇನ್ನೊಂದೆಡೆ ಅಭಿವೃದ್ಧಿಯ ಹೆಸರಿನಲ್ಲಿ ಗಿರಿಜನರನ್ನು ಕಾಡಿನಿಂದ ಹೊರದಬ್ಬಲಾಗುತ್ತಿದೆ. ಇದರಿಂದ ಎಲ್ಲೆಡೆ ಗಿರಿಜನರು ಬಂದೋ ತಮ್ಮದೆಲ್ಲವನ್ನೂ ತೊರೆದು ದೂರಹೋಗುತ್ತಿದ್ದಾರೆ. ಇಲ್ಲವೆ ಬಂದೂಕು ಹಿಡಿದು, ನಕ್ಸಲರಾಗುತ್ತಿದ್ದಾರೆ. ಬಂದೂಕಿನಿಂದ ಯಾವುದೇ ಜಯ ಸಾಧಿಸಲು ಅಸಾಧ್ಯವಾದರೂ, ಆ ಕ್ಷಣದ ಆವೇಶದಲ್ಲಿ ಬಂದೂಕಿಗೆ ಶರಣಾಗುತ್ತಿದ್ದಾರೆ. ಕಾಡಿನ ಸಾಮ್ಯದ ವಿಷಯದಲ್ಲಿ ಒಂದೆಡೆ ಸರ್ಕಾರ ತನ್ನ ಒಡೆತನ ಸ್ಥಾಪಿಸಲು ಹೊರಟಿದ್ದರೆ, ಇನ್ನೊಂದೆಡೆ ಗಿರಿಜನ ತಮ್ಮ ತಲತಲಾಂತರದ ಹಕ್ಕನ್ನು ಉಳಿಸಿಕೊಳ್ಳಲು ಹೆಣಗುತ್ತಿದ್ದಾರೆ.

ಇಲ್ಲಿ ಏಕಲವ್ಯನೂ ಸಹ ತನ್ನ ತಂದೆಯಿಂದ ಬಂದ ಈ ಕಾಡು ತನ್ನದೆಂದು ವಾದಿಸುತ್ತಿದ್ದಾನೆ. ವರ್ಗ ಸಂಘರ್ಷದ ಬೇರು ಭಾರತದಲ್ಲಿ ವರ್ಣ ವ್ಯವಸ್ಥೆಯಲ್ಲಿಯೇ ಇದೆ. ಕುವೆಂಪು ವರ್ಣ ವ್ಯವಸ್ಥೆಯನ್ನು ತಿರಸ್ಕರಿಸುತ್ತಲೇ ವರ್ಗ ವ್ಯವಸ್ಥೆಯ ವಿರುದ್ಧವೂ ಸಿಡಿದೇಳುತ್ತಾರೆ. ಅವರಿಗೆ ವರ್ಗ - ವರ್ಣ ಸಂಘರ್ಷದ ಪರಿಣಾಮ ತಿಳಿದಿತ್ತು. ಅದು ಅವರ 'ಕಲ್ಕಿ' ಕವನದ ಮೂಲಕವೂ ಹೊರಗೆಡಹಿದ್ದರು. ಶ್ರೀಮಂತರಲ್ಲಿ ಹಣ ಕೂಡ್ರೀಕರಣಗೊಂಡಂತೆಲ್ಲಾ ಬಡವರ ಬಡತನ ಗುಣಾಕಾರದ ಲೆಕ್ಕಗಳಂತೆ ಹೆಚ್ಚುತ್ತಲೇ ಹೋಗುತ್ತವೆ. ಅದು ಮುಂದೆ ಈ ವರ್ಗಗಳ ನಡುವಿನ ಘೋರ ಹಿಂಸಾಚಾರಕ್ಕೆ ದಾರಿಮಾಡಿಕೊಂಡುವ ಸಾಧ್ಯತೆಯೂ ಇದೆ ಎಂಬುದೇ 'ಕಲ್ಕಿ' ಕವನದ ವಿಷಯ.

ಏಕೆಂದರೆ ಬಡವರ ಆಕ್ರೋಶ ಬಡಬಾಗ್ನಿಯಾಗಿ ಶ್ರೀಮಂತರನ್ನು ಸುಡದೇ ಬಿಡದು. ಆ ಆಕ್ರೋಶದಲ್ಲಿ,

*''ಕುಡಿದನು ರಕ್ತವ ಮೊಗೆಮೊಗೆದು!*

*ತಿಂದನು ತಲೆಗಳ ತೆಗೆತೆಗೆದು!''* [೨]

ಈ ಸ್ಥಿತಿ ಉಂಟಾಗಬಹುದೆಂದು ಕುವೆಂಪು ಅಂದೇ ಎಚ್ಚರಿಕೆ ನೀಡಿದ್ದಾರೆ. ಆದರೆ ಅದು ಇಂದು ಸಂಭವಿಸುವ ಸ್ಥಿತಿ ಬಂದಿದೆ ಎಂದರೆ ತಪ್ಪಾಗಲಾರದು. ಎಲ್ಲೆಲ್ಲು ವರ್ಗ ತಾರತಮ್ಯ ತಾಂಡವವಾಡುತ್ತಿದೆ. ಲಕ್ಷ ಕೋಟಿಗಳ ಒಡೆಯರ ಸುದ್ಧಿಯ ಕೆಳಗೇ ಹಸಿವಿನಿಂದ ಸತ್ತವರ ವಿವರಗಳೂ ಕಂಡು ಬರುತ್ತಿವೆ. ವರ್ಣ ವ್ಯವಸ್ಥೆ ಪೋಷಿಸಿದ ಪುರೋಹಿತಶಾಹಿಗಳ ದೆಸೆಯಿಂದ ಇಂದು ಇಡೀ ನಾಡು ವರ್ಗ ಸಂಘರ್ಷದ ಹೊಸ್ತಿಲಲ್ಲಿ ಬಂದು ನಿಂತಿದೆ.

## ೨.೨ ಆಳುವ ಶಕ್ತಿಗಳ ಮೂಲಕ ದಮನ

ಈ ಮೊದಲೇ ಚರ್ಚಿಸಿರುವಂತೆ ಬ್ರಾಹ್ಮಣರು ತಮ್ಮ ಕೃತಕ ಸಿದ್ಧಾಂತಗಳನ್ನು, 'ಮನುಸ್ಮೃತಿ'ಯಂತಹ ಕುಕೃತಿಯನ್ನು ಮತ್ತು ಅಸ್ಪೃಶ್ಯತೆ, ಅಸಮಾನತೆ, ಇತ್ಯಾದಿ, ಇತ್ಯಾದಿ ಅಮಾನವೀಯ ಕಟ್ಟಳೆಗಳನ್ನು ಸಮಾಜದಲ್ಲಿ ಸ್ಥಾಪಿಸಲು ಆಳುವ ವರ್ಗ ಅಂದರೆ ಕ್ಷತ್ರಿಯರನ್ನು ಬಳಸಿಕೊಂಡರು. ಅಧಿಕಾರಯುತವಾಗಿ ಕಾನೂನಾಗದ ಹೊರತು ಪುರೋಹಿತಶಾಹಿಯ ಹುನ್ನಾರಗಳು ಜನರಲ್ಲಿ ಮನ್ನಣೆ ಪಡೆಯುವುದು ಅಸಾಧ್ಯವಾಗಿತ್ತು. ಏಕೆಂದರೆ ಅವರ ಎಲ್ಲಾ ಆಚರಣೆಗಳು, ಕೃತ್ಯಗಳು ಮೇಲು ನೋಟಕ್ಕೇ ಸಮಾಜವನ್ನು ಒಡೆಯುವ, ಮಾನವ ಮಾನವನ ನಡುವೆ ಅಂತರ, ಅಸಮಾನತೆ ಸಾರುವ ಅಂಶಗಳಿಂದ ಕೂಡಿದೆ ಎಂದು ತಿಳಿದುಬರುತ್ತಿದ್ದವು. ಈ ಕಾರಣದಿಂದಲೇ ಅವರು ತಮ್ಮ ಎಲ್ಲಾ ಕೃತ್ಯಗಳಿಗೂ ಅಧಿಕಾರದ ಚುಕ್ಕಾಣಿ ಹಿಡಿದವರ ಮೂಲಕ ಆದೇಶಗಳು ಹೊರಬೀಳುವಂತೆ ಮಾಡಿದರು. ಆದರೆ ಸಾಮಾನ್ಯನಿಗೂ ಗೋಚರಿಸುತ್ತಿದ ಬ್ರಾಹ್ಮಣ ಸಿದ್ಧಾಂತಗಳಲ್ಲಿನ ದೋಷ, ಆಳುವ ವರ್ಗಕ್ಕೆ ಅಂದರೆ ಕ್ಷತ್ರಿಯರಿಗೆ ಹೇಗೆ ತಿಳಿಯಲಿಲ್ಲ? ಅದರ ಹಿಂದೆಯೂ ಒಂದು ದೊಡ್ಡ ಇತಿಹಾಸ ಅಡಗಿದೆ. ಬ್ರಾಹ್ಮಣರ ಈ ಸಿದ್ಧಾಂತಗಳ ವಿರುದ್ಧ ಆರಂಭದಲ್ಲಿ ಕ್ಷತ್ರಿಯರು ಸಿಡಿದೆದ್ದಿದ್ದರು. ಆದರೆ ಬ್ರಾಹ್ಮಣರ ಚಾಣಾಕ್ಷದ ಮುಂದೆ ಅವರು ಸೋಲುಂಡು ಶರಣಾಗಬೇಕಾಯಿತು. "ಇದರ ಅರ್ಥ ಅರಸನಾದವನು ಯಾವಾಗಲೂ ವರ್ಣೋತ್ತಮರಿಗೆ ಹೆದರಿಕೊಂಡಿರಬೇಕು ಎಂಬುದು. ಒಂದು ವೇಳೆ ಅವನೇನಾದರೂ ಅವರ ವಿರೋಧ ಮಾಡಿಕೊಂಡರೆ ಪ್ರವಾಹಕ್ಕೆ ಕೊಚ್ಚಿ ಹೋಗುವ ಮಳಲ ಕಟ್ಟೆಯಂತೆ ಅವರ ಸ್ಥಿತಿ."[೩]

ಈ ಸನ್ನಿವೇಶವನ್ನು ಸ್ವಾಮಿ ಧರ್ಮತೀರ್ಥರು ಸಮರ್ಥವಾಗಿ ವಿವರಿಸಿದ್ದಾರೆ.

"ಬ್ರಾಹ್ಮಣ ಧರ್ಮದ ಆರಂಭ ಘಟ್ಟದಲ್ಲಿ ಪುರೋಹಿತರ ಆಟಾಟೋಪಗಳಿಂದ ರಾಜ ಮಹಾರಾಜರುಗಳು ಅಷ್ಟಾಗಿ ಗಲಿಬಿಲಿ-ಗೊಳ್ಳಲಿಲ್ಲ. ಬಹುಶ: ಕೆಲವು ಆರ್ಯ ಅರಸರು ಅವರಿಗೆ ಸಕ್ರಿಯವಾಗಿ ಪೋಷಣೆ ನೀಡಿರುವ ಸಾಧ್ಯತೆ ಇದೆ.

ಭಾರತೀಯ ರಾಜರನ್ನು ಪ್ರಜೆಗಳನ್ನೂ ಆರ್ಯ ಚೌಕಟ್ಟಿನಿಂದಾಚೆ ಇಟ್ಟು ಅವರ ಉಚ್ಛ್ರಾಯ ಶಕ್ತಿಯನ್ನು ನಿಯಂತ್ರಿಸುವ ಗುರಿ ಹೊಂದಿದ್ದ ಬ್ರಾಹ್ಮಣ ಧರ್ಮ ಕೆಲವು ಸಾಂಪ್ರದಾಯಿಕ ಆರ್ಯ ಚಕ್ರವರ್ತಿಗಳಿಗೆ ರುಚಿಸಿದ್ದಿರಬೇಕು. ಬ್ರಾಹ್ಮಣ ಸಿದ್ಧಾಂತವನ್ನು ಅಂಗೀಕರಿಸಿದ ಪ್ರಮುಖ ರಾಜರುಗಳಲ್ಲಿ ಕೋಸಲದ ರಾಜ ದಶರಥನೂ ಒಬ್ಬ. ತಮ್ಮ ಕ್ಷೇತ್ರವಾದ ಧರ್ಮ ಮತ್ತು ಯಜ್ಞಗಳಿಗೆ ಮತ್ರ ಹಾರುವರು ಸೀಮಿತರಾಗಿದ್ದವರೆಗೆ ಅವರ ಧಾಷ್ಟ್ಯ, ಆಡಂಬರಗಳು ಪ್ರಾಚೀನ ರಾಜಮನೆತನಗಳ ಸುಗಮ ಕಾರ್ಯ ನಿರ್ವಹಣೆಯಲ್ಲಿ ಯಾವ ಗೊಂದಲವನ್ನೂ ಉಂಟುಮಾಡಲಿಲ್ಲ. ಹಾರುವರು ಉತ್ತಮ ಮಂತ್ರಿಗಳು ಸಲಹೆಗಾರರೂ ರಾಯಭಾರಿಗಳೂ ಆಗಬಲ್ಲರೆಂದು ತೋರಿಸಿಕೊಟ್ಟಿದ್ದರು.

ಆದರೆ ಪುರೋಹಿತರ ದುರಾಸೆಗೆ ಇತಿಮಿತಿಯಿರಲಿಲ್ಲ ರಾಜರೂ ಸೇರಿದಂತೆ ಇಡೀ ಸಮಾಜವನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಲು ಹವಣಿಸಿದರು. ಯೋಧವರ್ಗದೊಡನೆ ಅವರು ರಾಜಕೀಯ ಅಧಿಕಾರಕ್ಕಾಗಿ ಕೈಹಾಕುವ ಮೊದಲೇ ತೊಂದರೆಗಳು ಕಾಣಿಸಿಕೊಂಡವು. ಏಕೆಂದರೆ ಕ್ಷತ್ರಿಯರು ಯಜ್ಞಪುರೋಹಿತರಾಗಿ ಕಾರ್ಯ ನಿರ್ವಹಿಸುವ ಹಕ್ಕನ್ನು ಹಾರುವರು ವಿರೋಧಿಸಿದರು. "ನಿರ್ದಿಷ್ಟ ವರ್ಗಗಳಿಗೆ ವೃತ್ತಿಗಳನ್ನು ನಿರ್ಬಂಧಗೊಳಿಸಬೇಕೆಂಬ ಮನೋಭಾವವನ್ನು ಪುರೋಹಿತ ಮತ್ತು ಯೋಧರ ನಡುವೆ ನಡೆದ ತಿಕ್ಕಾಟವನ್ನು ವೇದಗಳಲ್ಲೂ ರಾಮಾಯಣ ಮಹಾಭಾರತಗಳಲ್ಲೂ ವರ್ಣಿತವಾಗಿರುವ ವಶಿಷ್ಠ ವಿಶ್ವಾಮಿತ್ರರ ಹೋರಾಟ ಪ್ರತಿನಿಧಿಸುತ್ತದೆ. ಹಾರುವನ ಮಗ ಮಾತ್ರ ಪೌರೋಹಿತ್ಯ ಕರ್ತವ್ಯಗಳನ್ನು ಮಾಡಬೇಕೆಂದು ಪ್ರಚಲಿತವಾಗುತ್ತಿದ್ದ ಸಿದ್ಧಾಂತವನ್ನು ಕ್ಷತ್ರಿಯರು ವಿರೋಧಿಸಿದ ದಂಗೆ ಅದು. ಕ್ಷತ್ರಿಯನ ಮಗನೇಕೆ ಪುರೋಹಿತನಾಗಬಾರದು? ಅದು ಒಟ್ಟಾರೆ ವಶಿಷ್ಠ ವಿಶ್ವಾಮಿತ್ರರ ವಾಗ್ವಾದ ಅಂಶ"(c.v.Vydia', Epic India, P/56) ಆದ್ದರಿಂದ ಭಿನ್ನಾಭಿಪ್ರಾಯ ಧರ್ಮಕ್ಷೇತ್ರದಲ್ಲಿ, ಜ್ಞಾಪ್ರಪಂಚದಲ್ಲಿ ಹಾಗೂ ಆಧ್ಯಾತ್ಮಿಕ ಅಧಿಕಾರದಲ್ಲಿ ಮೊದಲು ಉದ್ಭವವಾಯಿತು. ವಿದ್ವದ್ ಸಭೆಗಳಲ್ಲಿ ಅದು ಬಿಸಿಬಿಸಿ ಚರ್ಚೆಯ ವಿಷಯವಾಯಿತು. ನಮ್ಮ ಕಾಲದಲ್ಲಿ ಸಾರ್ವಜನಿಕ ವಿಷಯಗಳನ್ನು ದಿನಪತ್ರಿಕೆಗಳಲ್ಲಿ ಚರ್ಚಿಸುವಂತೆ ಬ್ರಾಹ್ಮಣಧರ್ಮದ ಸಿದ್ಧಾಂತಗಳನ್ನು ಕುರಿತು ಕ್ಷತ್ರಿಯ ಮತ್ತು ಹಾರುವರ ನಡುವಣ ಕಾವಿನ ವಾಗ್ವಾದವು ಆಕಾಲದ ಸಾಹಿತ್ಯದ ವಿಷಯವಾಗಿತ್ತು. ವೇದಗಳು ಮತ್ತು ಯಜ್ಞಗಳ ಪ್ರಾಮಾಣ್ಯವನ್ನು, ಪುರೋಹಿತನ ಪ್ರಾಮುಖ್ಯತೆಯನ್ನು, ಬ್ರಾಹ್ಮಣನಿಗೆ ಎಲ್ಲಾ ವರ್ಗಗಳೂ ತಲೆ ಬಾಗಬೇಕಾದ್ದು ಕರ್ತವ್ಯ ಎಂಬುದನ್ನು ಸ್ಥಾಪಿಸಲು ಪುರೋಹಿತರು ಅನೇಕ ಬ್ರಾಹ್ಮಣಗಳನ್ನು ರಚಿಸಿದರು. ಯಾವುದೇ ಯುಗ ಅಥವಾ ದೇಶದಲ್ಲಿ ಮನುಷ್ಯ ಗಳಿಸಿರುವ ತತ್ವಜ್ಞಾನದ ಕೆಲವು ಅತ್ಯುನ್ನತ ಸತ್ಯಗಳನ್ನು ಪ್ರತಿಪಾದಿಸುವುದರ ಮೂಲಕ ಕ್ಷತ್ರಿಯರು ಈ ಸಿದ್ಧಾಂತಗಳನ್ನು ಪ್ರತಿಭಟಿಸಿದರು. ಅವು ಉಪನಿಷತ್ತುಗಳಲ್ಲಿ ಅಡಕವಾಗಿವೆ."[೧೪]

ಕ್ಷತ್ರಿಯ ಮತ್ತು ಬ್ರಾಹ್ಮಣರ ನಡುವನ ಈ ತಿಕ್ಕಾಟ ಕೇವಲ ಅವರಿಬ್ಬರ ಪ್ರಾಬಲ್ಯವನ್ನು ಮೆರೆಯಲು ಮಾತ್ರವಾಗಿತ್ತು. ಈ ತಿಕ್ಕಾಟ ಬಹಳ ಕಾಲದವರೆಗೆ ನಡೆಯಿತು. ಆದರೆ ಎಷ್ಟೇ ಪ್ರಯತ್ನಿಸಿದರೂ ಬ್ರಾಹ್ಮಣರ ಕುತಂತ್ರಗಳ ನಡುವೆ ಕ್ಷತ್ರಿಯರ ಪ್ರತಿರೋಧ ಸಫಲವಾಗಲಿಲ್ಲ. ಈ ಹಂತವನ್ನು ಸ್ವಾಮಿ ಧರ್ಮತೀರ್ಥರು ಎರಡನೇ ಘಟ್ಟವಾಗಿ ವಿವರಿಸಿದ್ದಾರೆ.

"ಎರಡನೆಯ ಅವಧಿಯನ್ನು ಬ್ರಾಹ್ಮಣ ಕ್ಷತ್ರಿಯರಿಗೆ ಜನರು
ಅಧೀನರಾದ ಹಾಗೂ ಸ್ವತ: ಕ್ಷತ್ರಿಯರೇ ಬ್ರಾಹ್ಮಣರಿಗೆ
*ಶರಣಾಗತರಾದ ಅವಧಿಯೆಂದು ಕರೆಯಬಹುದು."*[೧೫]

ಪುರೋಹಿತಶಾಹಿಯ ಕುತಂತ್ರಗಳನ್ನು ಕುವೆಂಪು ತಮ್ಮ ನಾಟಕಗಳ ಮೂಲಕ ಎತ್ತಿ ತೋರಿಸಿದ್ದಾರೆ. ಅದೇ ನಿಟ್ಟಿನಲ್ಲಿ ಪುರೋಹಿತಶಾಹಿ ವರ್ಗ ಆಳುವ ವರ್ಗವನ್ನು ತನ್ನ ಹಿಡಿತದಲ್ಲಿರಿಸಿಕೊಂಡು ತಮ್ಮ ಸಿದ್ಧಾಂತಗಳನ್ನು ಸಮಾಜದಲ್ಲಿ ಸ್ಥಾಪಿಸಲು ಅವರನ್ನು ಬಳಸಲು ಪ್ರಯತ್ನಿಸುವ ಬಗೆಯನ್ನು ತಮ್ಮ 'ಶೂದ್ರತಪಸ್ವಿ' ನಾಟಕದಲ್ಲಿ ಚಿತ್ರಿಸಿದ್ದಾರೆ. ತನ್ನ ಮಗನ ಅಕಾಲ ಮರಣಕ್ಕೆ ತಾನೇ ಹೊಣೆಯಾಗಿದ್ದರೂ ಬ್ರಾಹ್ಮಣನು ರಾಮನ ಮುಂದೆ ಶಂಬೂಕನ ಮೇಲೆ ಅದರ ಹೊಣೆಗಾರಿಕೆಯನ್ನು ಹೊರಿಸಲು ಮಾಡುವ ಪ್ರಯತ್ನವನ್ನು ಈ ನಾಟಕದಲ್ಲಿ ನೋಡಬಹುದು.

ಶೂದ್ರತಪಸ್ವಿಯಾದ ಶಂಬೂಕನನ್ನು ಅವಮಾನಿಸಿದ ಕಾರಣಕ್ಕಾಗಿ ಧರ್ಮ ಮುನಿದು ಬ್ರಾಹ್ಮಣನ ಪುಟ್ಟ ಹುಡುಗನನ್ನು ಬಲಿತೆಗೆದುಕೊಂಡಿದೆ. ಆದರೆ ಬ್ರಾಹ್ಮಣನ ಪ್ರಕಾರ ಅದು ಶೂದ್ರ ತಪಸ್ಸು ಮಾಡುತ್ತಿರುವುದರಿಂದ ಉಂಟಾಗಿರುವ ಅವಘಡ. ಈ ದೂರಿನೊಂದಿಗೆ ಬ್ರಾಹ್ಮಣ ದೊರೆಯಾದ ಶ್ರೀರಾಮನ ಬಳಿ ಬರುತ್ತಾನೆ.

*''ಕಂದಾ, ಕಂದಯ್ಯಾ, ಕಂದಮ್ಮಾ,*

*ಓ ಎನ್ನ ಕಂದಾ,*

*ಸಹಿಪೆನೆಂತೀ ಬಗೆಯ ಬೆಂಕೆಯಂ,*

*ನಿನ್ನಗಲ್ಕೆಯಂ.*

*ಕಣ್ಣೆ ಬೆಳಕಾಗಿರ್ದ ನೀನ್;*

*ಬಾಳ್ಗೆ ಉಸಿರಾಗಿರ್ದ ನೀನ್;*

*ಮುದಿತನಕ್ಕೊಂದೂರೆಗೋಲಾಗಿರ್ದ ನೀನ್ ಪುತ್ರಕ.''* ೧

ಎಂದು ರೋದಿಸುತ್ತಾನೆ. ಪುರೋಹಿತಶಾಹಿ ವರ್ಗ ಕ್ಷತ್ರಿಯರ ಮೇಲೆ ಹಿಡಿತ ಸಾಧಿಸಿದ ಮೇಲೆ ರಾಜ್ಯದ ಆಡಳಿತದಲ್ಲಿ ಅವರ ಹಸ್ತಕ್ಷೇಪ ವ್ಯಾಪಕವಾಯಿತು. ರಾಜ್ಯದಲ್ಲಿ ನಡೆಯಬೇಕಾದ ಎಲ್ಲ ಕಾರ್ಯಗಳಿಗೂ ಬ್ರಾಹ್ಮಣರ ಒಪ್ಪಿಗೆ ಬೇಕಾಗಿತ್ತು. ಅಂತೆಯೆ ಕ್ಷತ್ರಿಯರನ್ನು ಸಂತೃಸಲು ಪುರೋಹಿತರು ರಾಜರುಗಳಿಗೆ ಇಲ್ಲ ಸಲ್ಲದ ಬಿರುದುಗಳನ್ನು ನೀಡಿ. ಅವರನ್ನು ಹೊಗಳಿ ಹಾಡುವ ಸಾಹಿತ್ಯವನ್ನು ರಚಿಸಿ ತಕ್ಕಮಟ್ಟಿಗೆ ಕ್ಷತ್ರಿಯರನ್ನು ಸಂತೋಷ ಪಡಿಸುತ್ತಿದ್ದರು. ತಮ್ಮ ಕಾರ್ಯ ಸಾಧನೆಗೆ ದೇವರು ಧರ್ಮದ ಹೆಸರಿನಲ್ಲಿ ರಾಜರನ್ನು ಬೆದರಿಸಿ ಅವರಿಂದ ಆಗಬೇಕಾದದ್ದನ್ನು ಸಾಧಿಸಿಕೊಳ್ಳುತ್ತಿದ್ದರು.

ಅಂತೆಯೆ ಇಲ್ಲಿಯೂ ಬ್ರಾಹ್ಮಣ ರಾಮನ ರಾಜ್ಯದಲ್ಲಿ ಈ ರೀತಿ ನಡೆದಿದೆಯೆಂದರೆ ಧರ್ಮಕ್ಕೆ ಏನೋ ಮುನಿಸಾಗಿರಬೇಕು ಎಂದು ರೊದಿಸುತ್ತಾನೆ.

*''ಪೇಳ್ ನೀನ್, ಓ ಬೆಳ್ದಿಂಗಳಿರುಳೆ!*

*ಪೇಳ್ ನೀನ್, ಓ ಇಕ್ಷ್ವಾಕು ರಘುದಿಲೀಪಾದಿ*

*ರವಿಕುಲ ನರೇಂದ್ರರ ರಾಜ್ಯಧರ್ಮಸ್ವರೂಪಿಣೀ*

*ಹೇ ಅಯೋಧ್ಯಾ ನಗರಲಕ್ಷ್ಮೀ!*

*ಪಿಂತೆಂದುಂ ಕಂಡುದಿಲ್ಲಿಂತಪ್ಪ ಘೋರಮಂ;*

*ಮೇಣ್ ಕೇಳ್ದುಮಲ್ಲಮ್,*

*ಶ್ರೀರಾಮನಾಳ್ವಿಂದೆ ರಾಮಪ್ರಜೆಗೆ ಕುಂದೆ?*

*ದೊರೆಯ ದೋಷಮೆ ಕಾರಣಂ ಪ್ರಜಾಸಂಕಟಕೆ!*

*ಪೆರತಲ್ತು! ಪೆರತಲ್ತು!*

*ಏನೋ ಒಂದಿರಲ್ ಪೇಳ್ವುಮ್ ರಾಮಪಾಪಂ!''* [೨೭]

ಎಂದು ಶ್ರೀರಾಮ ಆಳ್ವಿಕೆಯಲ್ಲಿ ಏನೋ ಲೋಪವಾಗಿದೆ ಎಂದು ದೂರುತ್ತಾನೆ. ಆ ಲೋಪವೇನೆಂದರೆ,

*''ಸಾಲದೇನಾ ಶೂದ್ರನ ತಪಕೆ ಮುನಿದ ಧರ್ಮಶಾಪಂ!''* [೨೮]

ಶೂದ್ರನು ಅಕ್ಷರ ಕಲಿಯುವುದು, ಮಂತ್ರ ಕಲಿಯುವುದು, ತಪಸ್ಸು ಮಾಡುವುದೂ ಪಾಪವೆ. ಅದು ಅಧರ್ಮ, ಅದನ್ನು ತಡೆಯಬೇಕಾದದ್ದು ಕ್ಷತ್ರಿಯನಾದ ರಾಜನ ಧರ್ಮ ಆದರೆ ರಾಮ ಅದನ್ನು ಇಲ್ಲಿ ನಿರ್ವಹಿಸಿಲ್ಲ, ತನ್ನ ಆಳ್ವಿಕೆಯಲ್ಲಿ ಶೂದ್ರನೊಬ್ಬ ತಪಸ್ಸು ಮಾಡುತ್ತಿರುವುದು ಧರ್ಮಕ್ಕೆ ವಿರುದ್ಧವಾದದ್ದು ಎಂದು ವಾದಿಸುತ್ತಾನೆ. ಅಲ್ಲಿಗೆ ಆಗಮಿಸಿ ಬಂದ ರಾಮನನ್ನು ನೋಡಿದ ತಕ್ಷಣ ಬ್ರಾಹ್ಮಣನ ಕುತಂತ್ರ ಬುದ್ಧಿ ಕೆಲಸ ಮಾಡಲಾರಂಭಿಸುತ್ತದೆ. ಅದೆಂದರೆ ಅನಾದಿ ಕಾಲದಿಂದಲೂ ರಾಜರನ್ನು ಹಾಡಿ ಹೊಗಳಿ ಅವರನ್ನು ಸಂತಸ ಪಡಿಸುವುದು. ರಾಮನು ಬಂದ ತಕ್ಷಣ ಬ್ರಾಹ್ಮಣ,

*''ತ್ರಿಭುವನ ಪುಲಕಕಾರಿ ಧನ್ಯಮಿ ದರ್ಶನಂ!*

*ಕ್ರಮನ್ಯಾಸಂ ಸಪ್ತಸಾಗರ ಜೀವನಕ್ರಮಂ!*

*ವ್ಯೋಮಮ್ ವಪ್ರ:ಕಾಂತಿ!*

*ವನಾದ್ರಿ ಸಂಗದಿಂದಂಗಮೆ ವನಾದ್ರಿಯಾಗಿರ್ಪನ್!*

*ದಶರಥ ಪುತ್ರನೀತನ್ ರಘುಶ್ರೇಷ್ಠನೆ ದಿಟಂ.-*

*ಕರುಣಮೂರ್ತಿಯಾತನ್ ಕೌಸಲೆಯ ಕಂಡನೆ ವಲಂ.*

*ಋಷಿಶಿಷ್ಯನೀತನ್ ಮಹಾ ಸಂಯಮಿಯೈಸೆ.*

*ಹರಧನುವ ಮುರಿದವನ್ ಸುರಧನಸ್ಸುಂದರನ್,*

*ಮೈಥಿಲೀ ಮನೋಹರನ್ ಕುಸುಮಕೋಮಲನ್.*

*ನೀಲಮೇಘಶ್ಯಾಮನ್, ಗಿರಿವನಪ್ರಿಯನ್.-*

*ದಶಗ್ರೀವಾರಿ, ಉಗ್ರನೀತನ್, ವಜ್ರಪ್ರಜ್ಞಾ ಕಠೋರನ್!*

*ಆಂಜನಾಸುತ ಹೃದಯಮಿತ್ರನ್, ಪವಿತ್ರನ್,*

*ಪಂಚವಟಿಯೊಳ್ ನಿಂದವನ್;*

*ಗೋದಾವರಿಯ ಮಿಂದವನ್;-*

*ಶಬರಿಯ ಕಯ್ಯ ಪಣ್ಯಲಂಗಳನ್ ತಿಂದವನ್.*

*ಮೇರುಭವ್ಯನ್!*

*ಪ್ರೇಮಮೂರ್ತಿ, ಧರ್ಮಮೂರ್ತಿ, ಕ್ಷಮಾಮೂರ್ತಿ;*

*ಶಿಷ್ಟರಕ್ಷಾ ಮೂರ್ತಿ, ದುಷ್ಟಶಿಕ್ಷಾಮೂರ್ತಿ,*

*ನರದೇವನೀತನ್ ಪರದೈವಮೆ ವಲಂ!-*

*ಅಶಾಸ್ವರೂಪಯಾತನ್*

*ಬಂದಪ್ಪನಾಶೀರ್ವಾದ ಮೈ ತಪ್ಪವೋಲ್.*

*ಧನ್ಯನಾನಿನ್ ಬರ್ದುಕಿದೆನ್!*

*ಬರ್ದುಕಿದನ್! ಬರ್ದುಕಿದನ್!*

*ಬರ್ದುಕದಿರ್ಪನೆ ನನ್ನ ಕಂದನ್?*

*ಬರ್ದುಕಿದನ್, ಅವನುಂ ಬರ್ದುಕಿದನ್!''* [೧೯]

ಇಷ್ಟೆಲ್ಲಾ ಹೊಗಳಿದವನ ಮಾತನ್ನು ಯಾರಾದರೂ ಕೇಳದೆ ಇರಲು ಸಾಧ್ಯವೇ? ಇದು ಬ್ರಾಹ್ಮಣನಿಗೂ ತಿಳಿದಿತ್ತು. ಆದ್ದರಿಂದಲೆ ಅವನು ಮಗನ ಸಾವಿನ ದು:ಖದ ನಡುವೆಯೂ ಇಷ್ಟೆಲ್ಲಾ ಹೊಗಳಿಕೆಯ ಪೀಠಿಕೆ ಹಾಕುತ್ತಾನೆ. ಶ್ರೀರಾಮ ಅವನ ಮೊರೆಯನ್ನು ಆಲಿಸುತ್ತಾನೆ. ಆದರೆ ಇಲ್ಲಿ ಕುವೆಂಪು ಅವರ ಶ್ರೀರಾಮ ಪುರೋಹಿತಶಾಹಿಗಳ ಹುನ್ನಾರಗಳನ್ನು ತಿಳಿಯಲು ಶಕ್ತನಾಗಿದ್ದಾನೆ. ಕಾರಣ ಈತ ಕುವೆಂಪು ನಿರ್ಮಿಸಿರುವ ಆದರ್ಶ ರಾಮ ಆದ್ದರಿಂದಲೆ ಬ್ರಾಹ್ಮಣನನ್ನು ಅವನೇನಾದರೂ ತಪ್ಪೆಸಗಿದನೆ ಎಂದು ಕೇಳುತ್ತಾನೆ. ಅದಕ್ಕವನು.

*''ಪೆರ್‌ನಡೆಯ ತಾಯ್ತಂದೆವಿರ್ ನನ್ನವರ್.*

*ಬಿಜ್ಜೆಗಲಿಸಿಪೋರ್ಜರುಂ ಸಜ್ಜನರ್*

*ಪಾರ್ವರೊಳ್ ಪುಟ್ಟಿರ್ಪುದೆನ್ನಾತ್ಮಂ, ಪ್ರಭೂ.''* [೨೦]

ಅವನು ತಪ್ಪೆಸಗಲು ಸಾಧ್ಯವೇ ಇಲ್ಲ. ಏಕೆಂದರೆ ಅವನು ಹುಟ್ಟಿರುವುದು ಪವಿತ್ರತಮ ಹಾರುವರ ಮನೆಯಲ್ಲಿ. ಇದು ಪುರೋಹಿತಶಾಹಿಗಳ ಮನೋಧರ್ಮ. ತಾವು ಬ್ರಾಹ್ಮಣರಾಗಿ ಹುಟ್ಟಿದ ಕಾರಣದಿಂದಲೆ ಅವರು ಶ್ರೇಷ್ಠರು. ಅವರು ತಪ್ಪು ಮಾಡುವುದು ಸಾಧ್ಯವೇ ಇಲ್ಲದವರಾಗಿ ಹುಟ್ಟುತ್ತಾರೆ. ಮುಂದೆ ಬ್ರಾಹ್ಮಣ ತನ್ನ

ಕಂದನ ಜೊತೆ ಹೂವು ತರಲೆಂದು ಮುಂಜಾನೆ ಶಂಬೂಕಾಶ್ರಮವನ್ನು ಹೊಕ್ಕಿದ್ದನ್ನು ವಿವರಿಸುತ್ತಾನೆ. ಆಗ

**ಶ್ರೀರಾಮ**

*"ನಮಸ್ಕಾರಂಗೆಯ್ದಿರೇಂ?"* [20]

ಎಂದು ಕೇಳುತ್ತಾನೆ. ಅದಕ್ಕೆ ಬ್ರಾಹ್ಮಣ ಕಿವಿಮುಚ್ಚಿ

*"ಶಿವ ಶಿವ ಶಿವ!*

*ಅಂತಪ್ಪ ಘೋರಮಂ ನಾವೆಸಗಿದವೆಲ್ತು.*

*ಅರಿಯದಾ ಕುವರಂ ಕೈಮುಗಿಯಲಿರ್ದನ್;*

*'ಮಾಣ್, ಶೂದ್ರಂಗೆ ತುಳಿಲ್‌ಗೆಯ್ಯಲಾಗ!'*

*ಎಂದಾಂ ಬುದ್ಧಿಯಂ ತಿದ್ದಿತಡದೆನ್."* [21]

ಎಂದೆನ್ನುತ್ತಾನೆ. ಶಂಬೂಕ ಶೂದ್ರನಾದ ಕಾರಣ ಅವನಿಗೆ ಮರ್ಯಾದೆ ಸಲ್ಲಿಸುವುದು ಮಹಾಪಾಪ. ಆದರೆ ಈ ಮಾತಿನಿಂದ ಶ್ರೀರಾಮ; ಬ್ರಾಹ್ಮಣನ ಮಗನ ಮರಣದ ಹಿಂದಿನ ರಹಸ್ಯವನ್ನು ಅರಿಯುತ್ತಾನೆ. ತನ್ನ ಮನಸ್ಸಿನಲ್ಲಿಯೇ ನಿಶ್ಚಯಿಸುತ್ತಾನೆ.

*"ಈ ವರ್ಣಗರ್ವಾಂಧಂಗೆ,*

*ಈ ಶಾಸ್ತ್ರ ಮೂರ್ಖಗೆಂತೂ ಬುದ್ಧಿಗಲಿಪೆನ್?*

*ಶಂಬೂಕನ್ ಮಹಾಯೋಗಿ.*

*ತಪಸ್ವಿಯ ತಿರಸ್ಕೃತಿಗೆ ಮುನಿದ ಧರ್ಮಂ*

*ತಂದುದೀತನ ಮುದ್ದು ಕಂದಂಗೆ*

*ನನ್ನ ರಾಜ್ಯದೊಳುಂ ಅಕಾಲ ಮೃತ್ಯುವಂ.*

*ತನ್ನ ತಪ್ಪನೆ ತಿಳಿಯಲಾರದೀತನ್,*

*ಮರೆಯಿಂದಮೆನ್ನನ್,*

*ಬಹಿರಂಗಮಾ ಶಂಬೂಕಯೋಗಿಯನ್*

*ನಿಂದಿಸುತಿರ್ಪನ್."* [22]

ಶತಮಾನಗಳಿಂದ ಬ್ರಾಹ್ಮಣರ ಕುತಂತ್ರಕ್ಕೆ ಮಾರುಹೋಗಿ ಕ್ಷತ್ರಿಯರು ಅವರ ಮಾತಿನಂತೆ ನಡೆಯುತ್ತಿದ್ದರು. ಆದರೆ ಕುವೆಂಪು ಅವರ ರಾಮ ಪ್ರತಿರೋಧ ಒಡ್ಡುತ್ತಾನೆ. ಈ ನಾಟಕದಲ್ಲಿ ವರ್ಣಾಶ್ರಮದ ಮೊದಲೆರಡು ವರ್ಣಗಳಾದ ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವಿನ ಸಂಘರ್ಷ ಅಂತರ್ಗತವಾಗಿದೆ. ಈ ನಾಟಕದಿಂದ ಕುವೆಂಪು ಸಾಕಷ್ಟು ಟೀಕೆಗೆ ಗುರಿಯಾದರು. ಆದರೆ ಆ ಟೀಕೆಗಳೆಲ್ಲ ಪುರೋಹಿತಶಾಹಿ

ಮನೋಧರ್ಮದಿಂದ ಹೊರಬಂದ ಟೀಕೆಗಳು, ಅದಕ್ಕೆ ಅವರೇ ತಮ್ಮ ಮಾರ್ನುಡಿಯಲ್ಲಿ ಸಮರ್ಪಕ ಉತ್ತರ ನೀಡಿದ್ದಾರೆ.

## ೨ . ೩ ವರ್ಣಾಶ್ರಮ ಸಿದ್ಧಾಂತಗಳಿಗೆ ಪೆಟ್ಟು

ಕುವೆಂಪು ಹುಟ್ಟಿನಿಂದ ಶೂದ್ರರಾದ ಕಾರಣ ಅವರು ವಿದ್ಯೆ ಕಲಿತದ್ದು, ಬರೆಯಲು ಪ್ರಾರಂಭಿಸಿದ್ದು ಇವೆಲ್ಲವೂ ಪುರೋಹಿತಶಾಹಿಗಳ ಪ್ರಕಾರ ಮಹಾಪರಾಧಗಳು. ಏಕೆಂದರೆ ಶೂದ್ರನು ಸೇವೆಗಾಗಿ ಜನಿಸಿದವನು. ಬ್ರಾಹ್ಮಣರ ಸೇವೆ ಮಾಡುವುದೇ ಅವನ ಕರ್ತವ್ಯ ಆದರೆ ಕುವೆಂಪು ಲೇಖನಿ ಹಿಡಿದ ಕ್ಷಣವೇ ವರ್ಣಾಶ್ರಮದ ಈ ನಿಯಮಗಳು ಮುರಿದು ಬಿದ್ದಂತಾಯಿತು. ಇನ್ನು ಅವರ ಸಾಹಿತ್ಯದ ಉದ್ದಕ್ಕೂ ಅದನ್ನೇ ಮುಂದುವರಿಸಿಕೊಂಡು ಬಂದರು. ಅವರ ನಾಟಕಗಳಂತೂ ಬ್ರಾಹ್ಮಣ ವರ್ಗಕ್ಕೆ ಎಳೆದ ಬರೆಗಳು. ಅವರು ಜಲಗಾರ, ಶ್ರೀರಾಮ ಮತ್ತು ಅಬ್ಬೆಯ ಮೂಲಕ ಅದನ್ನು ಸಾಧಿಸಿದ್ದಾರೆ. ಇವರೆಲ್ಲ 'ಮನುಸ್ಮೃತಿ'ಗೆ ವಿರುದ್ಧವಾದ ಕಾರ್ಯಗಳನ್ನು ಮಾಡುತ್ತಾರೆ.

### ಅ. ಜಲಗಾರ

ಶೂದ್ರನಾಗಿ ಹುಟ್ಟುವುದು ಕಳೆದ ಜನ್ಮದ ಪಾಪದ ಫಲವಾಗಿ, ಆದುದರಿಂದ ಅವನು ದರಿದ್ರನು ಅವನಿಗೆ ಜೀವನವೆಲ್ಲಾ ದಾಸ್ಯವೇ ಮುಂದಿನ ಜನ್ಮದ ಉತ್ತಮಿಕೆಗೆ ಮಾರ್ಗ. ಇದು ಮನುವಿನ ಸಿದ್ಧಾಂತ, ಅದನ್ನು ಈ ಕೆಲವು ಶ್ಲೋಕಗಳ ಮೂಲಕ ನೋಡಬಹುದು.

೧ ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕೀತಮೇವ ವಾ/

ದಾಸ್ಯಯೈವ ಹಿ ಸೃಷ್ಟೋ ಸೌ ಬ್ರಾಹ್ಮಣಸ್ಯ ಸ್ವಯಂಭುವಾ

(ಅಧ್ಯಾಯ - ೮, ಶ್ಲೋಕ- ೪೧೩)

- ಶೂದ್ರನು ಸೇವೆಗಾಗಿ ಜನಸಿದವನು. ಆದುದರಿಂದ ಬ್ರಾಹ್ಮಣನು ಅವನಿಂದ ಸೇವೆ ಮಾಡಿಸಿಕೊಳ್ಳಬೇಕು.

೨ ಸ್ವರ್ಗಾರ್ಥಮುಭಯಾರ್ಥಂ ವಾ ವಿಪ್ರನಾರಾಧಯೋತ್ತುಸಃ/

ಜಾತ ಬ್ರಾಹ್ಮಣಶಬ್ಧಸ್ಯ ಸಾ ಹ್ಯಸ್ಯ ಕೃತಕೃತ್ಯತಾ

(ಅಧ್ಯಾಯ-೧೦, ಶ್ಲೋಕ- ೧೨೨)

-ಈ ಲೋಕದಲ್ಲೂ, ಪರಲೋಕದಲ್ಲೂ ಶೂದ್ರನಿಗೆ

ಬ್ರಾಹ್ಮಣ ಸೇವೆಯಿಂದ ಮುಕ್ತಿ ಲಭಿಸುವುದು.

೨ ವಿಪ್ರ ಸೇವೈವ ಸೂದ್ರಸ್ಯ ವಿಶಿಷ್ಟಂ ಕರ್ಮ ಕೀರ್ತ್ಯತೇ/

ಯದತ್ಯೋನ್ಯದ್ಧಿ ಕುರುತೇ ತದ್ಭವತ್ಯಸ್ಯ ನಿಷ್ಫಲಂ

(ಅದ್ಯಾಯ-೧೦, ಶ್ಲೋಕ-೧೨೩)

-ಶೂದ್ರನಿಗೆ ವಿಪ್ರಸೇವೆಯು ಸುಖದಾಯಕವು ಬೇರೇನೂ ಬೇಡ"[೨೪]

ಕೇವಲ ಸೇವೆಗೆ ಸೀಮಿತವಾಗಿರಬೇಕಾದ ಶೂದ್ರ ಮಹಾಪಾಪಿ, ಅವನು ದೇವರನ್ನು ಮುಟ್ಟಬಾರದು, ಗುಡಿಯ ಒಳಗೆ ಬರಬಾರದು. ಆದರೆ ಕುವೆಂಪು ಅವರ ಜಲಗಾರ ತನ್ನ ಕಾಯಕ ತತ್ವದ ಮೂಲಕ ಶಿವನನ್ನೇ ಪ್ರತ್ಯಕ್ಷವಾಗುವಂತೆ ಮಾಡುತ್ತಾನೆ. ದೇವರು ಯಾರ ಸ್ವತ್ತೂ ಅಲ್ಲ ಮತ್ತು ಕರ್ಮದ ಆಧಾರದ ಮೇಲೆ ಯಾರೂ ಕೀಳಲ್ಲ, ಮೇಲಲ್ಲ ಎಂದು ಕುವೆಂಪು ತೋರಿಸಿ ಕೊಡುತ್ತಾರೆ. ಈ ಮೂಲಕ ದೇವರು ಕೇವಲ ಬ್ರಾಹ್ಮಣರ ಸ್ವತ್ತು ಎಂಬ ವಾದವನ್ನು ಮುರಿಯುತ್ತಾರೆ.

## ಆ. ಶ್ರೀರಾಮ

'ಶೂದ್ರತಪಸ್ವಿ' ನಾಟಕದಲ್ಲಿ ಶ್ರೀರಾಮ ಬ್ರಾಹ್ಮಣರ ಗರ್ವವನ್ನು ಮುರಿಯುತ್ತಾನೆ. 'ಮನುಸ್ಮೃತಿ'ಯಲ್ಲಿ ಒಂದು ಶ್ಲೋಕವಿದೆ. ಅದರ ಪ್ರಕಾರ ಬ್ರಾಹ್ಮಣರಿಗೆ ಯಾವ ಕಾರಣಕ್ಕೂ ಮರಣದಂಡನೆ ಇಲ್ಲ. ಆ ಶ್ಲೋಕ ಹೀಗಿದೆ.

'ನಜಾತು ಬ್ರಾಹ್ಮಣಂ ಹನ್ಯಾತ್ಸರ್ವಪಾಪೇಷ್ವಪಿ ಸ್ಥಿತಂ/

ರಾಷ್ಟ್ರದೇನಂ ಬಹಿ: ಕುರ್ಯಾತ್ಸಮಗ್ರಧನಮಕ್ಷತಂ

(ಅಧ್ಯಾಯ-೮, ಶ್ಲೋಕ-೩೮೦)

-ಯಾವ ತಪ್ಪಿಗೂ ಬ್ರಾಹ್ಮಣನಿಗೆ ಮರಣ ದಂಡನೆಯಿಲ್ಲ.

ಅವನನ್ನು ಧನ ಸಹಿತವಾಗಿ ದೇಹವನ್ನು ಪೀಡಿಸದೆ

ಓಡಿಸುವುದು ಪರಮಾವಧಿ ದಂಡವು."[೨೫]

ಆದರೆ ಈ ಕಟ್ಟಳೆಯನ್ನು ಶ್ರೀರಾಮ ಮುರಿಯಲು ಹೊರಡುತ್ತಾನೆ. ಶಂಬೂಕನತ್ತ ಬಿಟ್ಟ ಬ್ರಹ್ಮಾಸ್ತ್ರ ಅವನಿಗೆ ಪ್ರದಕ್ಷಿಣೆ ಹಾಕಿ ಬ್ರಾಹ್ಮಣನ್ನು ಅಂದರೆ ನಿಜವಾದ ಪಾಪಿಯನ್ನು ಕೊಲ್ಲಲು ಬರುತ್ತದೆ. ಆದರೆ ಬ್ರಾಹ್ಮಣ ಕ್ಷಮೆಯಾಚಿಸುವುದರಿಂದ ಅವನು ಬದುಕುಳಿಯುತ್ತಾನೆ. ಇಲ್ಲಯೂ ಕೂಡ ಕುವೆಂಪು 'ಮನುಸ್ಮೃತಿಯ' ಕಟ್ಟಳೆಗಳನ್ನು ಮುರಿಯುವ ಪ್ರಯತ್ನ ಮಾಡಿದ್ದಾರೆ.

## ೯. ಅಬ್ಬೆ

ಏಕಲವ್ಯನ ತಾಯಿ ಅಬ್ಬೆ ಕುವೆಂಪು ಅವರ ಅದ್ಭುತ ಪಾತ್ರಸೃಷ್ಟಿ. ಅಬ್ಬೆಯ ಮೂಲಕ ಕುವೆಂಪು ಅವರು ಅಪರೂಪದ ಒಂದು ಅಂಶವನ್ನು ಸಾಧಿಸುತ್ತಾರೆ. ಸಾಮಾನ್ಯವಾಗಿ ವರ ನೀಡುವುದು, ಶಾಪ ಹಾಕುವುದು ಕೇವಲ ಬ್ರಾಹ್ಮಣರಿಗೆ ಮೀಸಲು. ಏಕೆಂದರೆ ಅವರ ಪ್ರಕಾರ ದೇವರಿಗೆ ಕೇವಲ ಅವರು ಮಾತ್ರ ಪ್ರೀತಿ ಪಾತ್ರರು. ಆದ್ದರಿಂದ ಅವರಿಗೆ ಮಾತ್ರ ಆ ಶಕ್ತಿ ಇರುತ್ತದೆ. ಆದರೆ ರಕ್ತದ ಮಡುಪಿನಲ್ಲಿ ಬಿದ್ದಿದ್ದ ಏಕಲವ್ಯನ ಹೆಬ್ಬೆರಳನ್ನು ಕಂಡೊಡನೆ ಅಬ್ಬೆ

"ಆರ್ಗೊ ಬಲಿ ನನ್ನ ಕಂದನ ಬೆರಳ್
[illegible]
S° AiA ÏD ¥Á| AiÁPÉgÀi"

ಎಂದು ಶಾಪಕೊಡುತ್ತಾಳೆ. ಕೇವಲ ಬ್ರಾಹ್ಮಣರಿಗೆ ಮೀಸಲಾಗಿದ್ದ ಶಕ್ತಿಯನ್ನು ಒಬ್ಬ ದಲಿತ ಮಹಿಳೆಯೂ ಉಪಯೋಗಿಸುತ್ತಾಳೆ. ಅದರಲ್ಲಿ ವಿಶೇಷವೆಂದರೆ ಅದು ಫಲಿಸುತ್ತದೆ ಕೂಡ. ಹೀಗೆ ಕುವೆಂಪು ತಮ್ಮ ಪ್ರತಿ ಪಾತ್ರದ ಮೂಲಕವೂ ಪುರೋಹಿತ ಶಾಹಿಗಳ ಸ್ಥಾಪಿತ ಸಿದ್ಧಾಂತಗಳನ್ನು ಮುರಿಯುತ್ತಾ ಸಾಗುತ್ತಾರೆ.

# ಆಕರ ಕೃತಿಗಳು

೧. ಶಿವಾರೆಡ್ಡಿ ಕೆ.ಸಿ : ೨೦೦೪,ಕುವೆಂಪು ಸಮಗ್ರ ನಾಟಕ, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ಸಂಪಾದಕರ ಮಾತು

೨. ರಾಮಮನೋಹರ ಲೋಹಿಯಾ : ೧೯೯೬, ಭಾಷೆ ಮತ್ತು ಇತಿಹಾಸ, ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಮೂರು), ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ-೧೯೫

೩. ಮನುಸ್ಮೃತಿ : ೧೯೯೬ (ಮೂರನೆ ಮುದ್ರಣ), ಅನು: ಚಕ್ರಕೋಡಿ ಈಶ್ವರಶಾಸ್ತ್ರೀ, ಸಮಾಜ ಪುಸ್ತಕಾಲಯ, ಧಾರವಾಡ, ಪುಟ- ೪೭೪

೪, ಶಿವಾರೆಡ್ಡಿ ಕೆ.ಸಿ : ೨೦೦೪,ಕುವೆಂಪು ಸಮಗ್ರ ನಾಟಕ, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ - ೨೪೫

೫. -ಅದೇ-

೬. -ಅದೇ-

೭. -ಅದೇ-

೮. -ಅದೇ-

೯. -ಅದೇ-

೧೦. -ಅದೇ-

೧೧. -ಅದೇ-

೧೨. ಕುವೆಂಪು : (ತಿಳಿಸಿಲ್ಲ), ಆಯ್ದ ಕುವೆಂಪು ಕವನಗಳು, ಸಂ. ಸಿ.ಪಿ.ಕೆ, ಚೇತನ ಬುಕ್ ಹೌಸ್, ಮೈಸೂರು, ಪಟ - ೮೨

೧೩. ಕುವೆಂಪು : ೨೦೦೪,ಕುವೆಂಪು ಸಮಗ್ರ ಗದ್ಯ - ೨, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ - ೭೩೭

೧೪. ಸ್ವಾಮಿ ಧರ್ಮತೀರ್ಥ : ೨೦೦೩ (ಮೂರನೆ ಮುದ್ರಣ), ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಅನು: ಭಗವಾನ್, ಮಹಿಮ ಪ್ರಕಾಶನ, ಮೈಸೂರು, ಪುಟ -೭೩

೧೫. -ಅದೇ-ಪುಟ - ೭೪

೧೬. -ಅದೇ-ಪುಟ - ೨೦೪

೧೭. ---ಅದೇ-ಪುಟ - ೨೦೫

೧೮. --ಅದೇ-ಪುಟ - ೨೬

೧೯. -ಅದೇ-ಪುಟ - ೨೧೦

೨೦. -ಅದೇ-

೨೧. -ಅದೇ-ಪುಟ - ೨೧೨

೨೨. -ಅದೇ-

೨೩. -ಅದೇ-ಪುಟ - ೨೧೩

೨೪. ರಾಮಮನೋಹರ ಲೋಹಿಯಾ : ೧೯೯೬, ಭಾಷೆ ಮತ್ತು ಇತಿಹಾಸ, ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಮೂರು), ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ-೩೭೯, ೪೭೨, ೪೭೩

೨೫. -ಅದೇ-ಪುಟ - ೭೭೩

೨೬. ಶಿವಾರೆಡ್ಡಿ ಕೆ.ಸಿ : ೨೦೦೪,ಕುವೆಂಪು ಸಮಗ್ರ ನಾಟಕ, ಸಂ: ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ - ೨೭೭

# ಅಧ್ಯಾಯ-೩

# ಸಮಕಾಲೀನ ಸಮಸ್ಯೆಗಳೊಂದಿಗೆ ಮುಖಾಮುಖಿ

ಯಾವುದೇ ಸಾಹಿತಿ ಅಥವಾ ಸಾಹಿತ್ಯ ಸಾರ್ಥಕವಾಗಬೇಕಾದರೆ ಅದು ಅಂದಿನ ಸಮಾಜದ ಜನಗಳ ಸಮಸ್ಯೆಗಳನ್ನು ಬಿಂಬಿಸುವಲ್ಲಿ ಯಶಸ್ವಿಯಾಗಬೇಕು. ಅದೇ ಸಾಹಿತಿ ಅಥವಾ ಸಾಹಿತ್ಯ ನಿರಂತರವಾಗಿ ಜನತೆಯ ನಡುವೆ ಉಳಿಯಬೇಕಾದರೆ ಅದರಲ್ಲಿನ ಅಂಶಗಳ ಮುಂದಿನ ಪೀಳಿಗೆಗೆ ಅಥವಾ ಸಮಾಜಕ್ಕೆ ಮತ್ತು ಅದರ ಸಮಸ್ಯೆಗಳಿಗೆ ಸ್ಪಂದಿಸುವಂತಿರಬೇಕು. ಇಲ್ಲವಾದರೆ ಸಾಹಿತ್ಯ ಕೇವಲ ರಸ ಸ್ವಾದನೆಗಾಗಿ ರಚಿಸಲ್ಪಟ್ಟದ್ದಾಗಿ ಕೆಲವು ದಿನಗಳ ನಂತರ ಹಿಂದೆಸರಿಯುತ್ತದೆ.

ಕುವೆಂಪು ಅವರ ಸಾಹಿತ್ಯ ಚಿರಕಾಲ ಉಳಿಯುವಂತಾಗಿರುವುದು ಅದರ ಸಾರ್ವಕಾಲೀನ ಚಿಂತನೆಗಳ ಮೂಲಕವೆ. ಅವರ ಎಲ್ಲಾ ಸಾಹಿತ್ಯ ಪ್ರಕಾರಗಳು ಒಂದಲ್ಲ ಒಂದು ರೀತಿಯಲ್ಲಿ ಅಂದಿನ, ಇಂದಿನ ಮತ್ತು ಮುಂದಿನ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನ ಮಾಡುತ್ತವೆ. ಅವರ ಪ್ರಕಾರ "ನಿರ್ಜಾತಿಯ ನಿರ್ಮತೀಯವಾದ ಮೌಢ್ಯ ದೂರವಾದ ಚಿರಂತನಾಂಶಗಳಿಂದ, ವಿಶ್ವ ಮಾನವ ತತ್ವಗಳಿಂದ ಕೂಡಿದ್ದರೇನೇ ಸಾಹಿತ್ಯ ವಿಶ್ವಮಾನ್ಯವಾಗುತ್ತದೆ. ಉಳಿದದ್ದೆಲ್ಲ ತಿರಸ್ಕೃತವಾಗುತ್ತದೆ."[1] ಅವರ ನಾಟಕಗಳೂ ಕೂಡ ಈ ಪರಂಪರೆಯನ್ನೇ ಮುಂದುವರಿಸಿಕೊಂಡು ಸಾಗುವಲ್ಲಿ ಸಫಲವಾಗುತ್ತವೆ. ಅವರ ನಾಟಕಗಳಲ್ಲಿ ಸಮಾಜದ ಎಲ್ಲಾ ಸಮಸ್ಯೆಗಳ ಬಗ್ಗೆ ಅಸಮಾಧಾನ, ಆಕ್ರೋಶವನ್ನು ನಾವು ಕಾಣಬಹುದು. ಅದರಲ್ಲೂ ವಿಶೇಷವಾಗಿ ಭಾರತೀಯ ಸಮಾಜವನ್ನು ಇಡೀ ಜಗತ್ತಿನಲ್ಲಿಯೇ ಅತ್ಯಂತ ಹೀನ ಆಚರಣೆಗಳ ಗೂಡಾಗಿಸಿರುವ ಜಾತಿ ಪದ್ಧತಿಯ ಬಗ್ಗೆ ನಿರಂತರ ಟೀಕೆಯನ್ನು ನಡೆಸಿದ್ದಾರೆ. "ನಾವೀಗ ಎದುರಿಸಬೇಕಾದ ಸಮಸ್ಯೆಗಳೆಂದರೆ ಅಸ್ಪೃಶ್ಯತೆ, ಜಾತೀಯತೆ, ಮೌಢ್ಯ ಹಾಗೂ ವರ್ಣಾಶ್ರಮ ನೀತಿಯಿಂದ ಉದ್ಭವಿಸುತ್ತಿರುವ ಸಮಸ್ಯೆಗಳು, ಜತೆಗೆ ಭ್ರಷ್ಟಾಚರ. ಇವುಗಳನ್ನು ಎತ್ತಿತೋರುವ, ಖಂಡಿಸುವ ಮತ್ತು ಇವುಗಳಿಗೆ ತಕ್ಕ ಪರಿಹಾರವನ್ನು ಕಾಣಿಸುವ ಸಾಹಿತ್ಯ ಸೃಷ್ಟಿ ಮೊದಲು ಆಗಬೇಕಿದೆ. ಜಾತಿ ಮತಗಳಿಂದ ಮುಕ್ತಗೊಂಡ ನವಸಮಾಜದ ನಿರ್ಮಾಣ ಪ್ರತಿಯೊಬ್ಬ ಭಾರತೀಯನ ನಿತ್ಯ ಚಿಂತನದ ವಸ್ತುವಾಗಬೇಕು. ನಮ್ಮ ಸಾಹಿತಿಗಳ ದೃಷ್ಟಿ ಯಾವಾಗಲೂ ಈ ಕಡೆಗೆ ಮುಖವಾಗಿದ್ದರೆ ನಾಡಿಗೆ ಶ್ರೇಯಸ್ಸು"[2] ಎಂದು ಅವರ ಅಭಿಪ್ರಾಯ. ಈ ನಿಟ್ಟಿನಲ್ಲಿ ಅವರ ಪ್ರಮುಖ ನಾಟಕಗಳಾ ಜಲಗಾರ, ಶೂದ್ರ ತಪಸ್ವಿ ಮತ್ತು ಬೆರಳ್ ಗೆ ಕೊರಳ್ ನಾಟಕಗಳನ್ನು ಗಮನಿಸಬಹುದು. ಈ ಜಾತಿ ಪದ್ಧತಿ ಇಂದಿಗೂ ನಮ್ಮಲ್ಲಿ ಅಸ್ತಿತ್ವ ಪಡೆದಿದೆ. ಅದು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಎರಡೂ ಬಗೆಯಲ್ಲಿ ನಮ್ಮ ನಡುವೆ ಜೀವಂತವಾಗಿದೆ. ಈ ಹಿನ್ನೆಲೆಯಲ್ಲಿ ಅಂದಿನ ಕುವೆಂಪು ಅವರ ಚಿಂತನಾ ಕ್ರಮವನ್ನು ಅನುಸರಿಸಿ ಇಂದಿಗೂ ಅದೇ ಸಮಸ್ಯೆಗಳನ್ನು ಹಿಮ್ಮೆಟ್ಟುವ ಪ್ರಯತ್ನ

ನಡೆಯಬೇಕಾಗಿದೆ. ಅವರು ಅಂದು ತಮ್ಮ ನಾಟಕಗಳ ಮೂಲಕ ವ್ಯಕ್ತಪಡಿಸಿದ ಆತಂಕಗಳು ಇಂದು ವಾಸ್ತವ ನೆಲೆಯಲ್ಲಿ ತಲವೂರಿವೆ. ಆ ಆತಂಕಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.



## ೩ . ೧ ಯುವ ಜನಾಂಗದ ನವ-ಪುರೋಹಿತಶಾಹಿ

ಯಾವುದೇ ದೇಶ ಪ್ರಗತಿಯ ಪಥದಲ್ಲಿ ಸಾಗಬೇಕಾದರೆ ಆ ದೇಶದ ಯುವಕರು ಬಹು ಮುಖ್ಯ ಪಾತ್ರವಹಿಬೇಕಾಗುತ್ತದೆ. ಯುವಜನಾಂಗವೇ ದೇಶವನ್ನು ಮುನ್ನಡೆಸಬಲ್ಲ ಏಕೈಕ ಶಕ್ತಿ. ಕುವೆಂಪು ಅವರು ಸಾಹಿತ್ಯ ಕೃಷಿಗೆ ತೊಡಗಿದ ಕಾಲದಲ್ಲಿ ಭಾರತದಲ್ಲಿ ಒಂದು ಹೊಸ ಅಲೆಯೆದ್ದಿತ್ತು. ಅದೆಂದರೆ ಕೇವಲ ಪುರೋಹಿತ ವರ್ಗಕ್ಕೆ ಮೀಸಲಾಗಿದ್ದ ಕಲಿಕೆಯ ಅವಕಾಶ ಬ್ರಿಟೀಷರ ಮೂಲಕ ಸಮಾಜದ ಎಲ್ಲಾ ವರ್ಗಗಳಿಗೂ ತೆರೆಯಲ್ಪಟ್ಟಿತು. ಈ ಕಾರಣದಿಂದ ದೇಶದ ಯುವ ಜನರಲ್ಲಿ ಒಂದು ಹೊಸ ಆಶಾ ಭಾವನೆ ಮೂಡಿತ್ತು. ಇನ್ನು ದೇಶವು ಸಮಗ್ರ ಉನ್ನತಿಯ ಕಡೆಗೆ ಹೊರಳುವುದು ಖಚಿತ ಎಂಬ ಭಾವನೆ ಮೂಡಲಾರಂಭಿಸಿತು. ಪುರೋಹಿತಶಾಹಿ ವರ್ಗ ಶತಮಾನಗಳಿಂದ ಜನರಲ್ಲಿ ಮನೆ ಮಾಡಿದ್ದ ಮೌಢ್ಯಗಳಿಗೆ ಅಂತ್ಯ ಕಾಲವಾಗಬಹುದೆಂದು ಪ್ರಗತಿಪರರಲ್ಲಿ ಬಲವಾದ ನಂಬಿಕೆಯಿತ್ತು. ಆದರೆ ವಿದ್ಯಾಭ್ಯಾಸದ ಬಲ ಪಡೆದ ಯುವ ಜನಾಂಗ ಬೇರೆ ರೀತಿಯ ಪುರೋಹಿತಶಾಹಿಗೆ ನಾಂದಿ ಹಾಡುವ ಹಾದಿಯಲ್ಲಿತ್ತು. ಅದರ ಬಗ್ಗೆ ಕುವೆಂಪು ತಮ್ಮ 'ಜಲಗಾರ' ನಾಟಕದಲ್ಲಿ ವಿಶ್ಲೇಷಿಸಿದ್ದಾರೆ.



ಪುರೋಹಿತಾಶಾಹಿಯ ವಿರುದ್ಧ ಅಭಿಪ್ರಾಯಗಳು ಮೂಡಲು ಶಿಕ್ಷಣ ಕ್ಷೇತ್ರ ಎಲ್ಲರಿಗೂ ಮುಕ್ತವಾಗಿದ್ದೆ ದೊಡ್ಡ ಕಾರಣ. ಶಿಕ್ಷಣದ ಮೂಲಕ ಪುರೋಹಿತವರ್ಗದ ಎಲ್ಲ ಕುತಂತ್ರಗಳನ್ನು, ಮೌಢ್ಯಗಳನ್ನು, ಅನಾಚಾರಗಳನ್ನು ತಿಳಿಯುವಲ್ಲಿ ಯುವಜನಾಂಗ ಸಫಲವಾಯಿತು. ಕುವೆಂಪು ತಮ್ಮ 'ಜಲಗಾರ' ನಾಟಕದಲ್ಲಿ ಮೊದಲು ಈ ಅಭಿಪ್ರಾಯವನ್ನೇ ಮೂಡಿಸುತ್ತಾರೆ. ಇಬ್ಬರು ತರುಣರ ಮಾತುಗಳ ಮೂಲಕ ಇದು ವ್ಯಕ್ತವಾಗುತ್ತದೆ.

" ***ಮೊದಲನೆಯ ತರುಣ***

*ದೇಗುಲದೊಳವಿತುಕೊಂಡಿಹನಂತೆ ಪರಶಿವನು!*

*ಜಗವೆಲ್ಲ ದೇವನಿಹ ಗುಡಿಯಲ್ಲವೇ, ಗೆಳೆಯ?-*

*ಮತದ ಮದ್ಯವ ಕುಡಿದು ತಲೆಕೆಟ್ಟಿಹುದು ಮಂದಿ!*

***ಎರಡನೆ ತರುಣ***

*ಮೊದಲ ಠಕ್ಕನು ಮೊದಲ ಬೆಪ್ಪನಂ ಸಂಧಿಸಲು*

*ಸಂಭವಿಸಿತೀ ಮತ ಎಂಬ ಮತಿವಿಕಾರಂ*

................

................"[೨]

ತರುಣರ ಮಾತುಗಳು ಎಂತಹ ಪ್ರಗತಿಪರರನ್ನಾದರೂ ಗರ್ವಪಡುವಂತೆ ಮಾಡಬಲ್ಲವು. ಎಂತಹ ಪುರೋಹಿತ ವರ್ಗವನ್ನಾದರೂ ಆತಂಕದಲ್ಲಿ ಸಿಲುಕಿಸಬಲ್ಲವು. ಏಕೆಂದರೆ ಶತಮಾನಗಳಿಂದ ಜನರನ್ನು ವಂಚಿಸಲಿ ಪುರೋಹಿತ ವರ್ಗದ ಮುಖ್ಯ ಅಸ್ತ್ರಗಳಾದ ದೇವರು, ದೇಗುಲ ಮತ್ತು ಧರ್ಮ ಈ ಮೂರೂ ಪರಿಕಲ್ಪನೆಗಳ ಮೇಲೆ ಏಕಕಾಲದಲ್ಲಿ ಪ್ರಹಾರ ಮಾಡಲಾಗುತ್ತಿದೆ. ಈ ಮೂರು ನಂಬಿಕೆಗಳ ಮೇಲೆ ಜನರಿಗೆ ಅಪನಂಬಿಕೆ ಮೂಡಿದರೆ ಪುರೋಹಿತ ವರ್ಗ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. ಶಿಕ್ಷಣಕ್ಕೆ ತೆರೆದುಕೊಂಡಿರುವ ಯುವಕರು ಈ ಮೌಢ್ಯಗಳ ವಿರುದ್ಧ ಬಂಡೆದ್ದಿದ್ದಾರೆ.

ಆದರೆ ಶಿಕ್ಷಣದಿಂದ ಪ್ರೌಢರಾದ ಯುವಜನಾಂಗ ಮತ್ತೊಂದು ಪುರೋಹಿತಶಾಹಿಯ ಕಡೆಗೆ ವಾಲಲಾರಂಭಿಸಿತು. ಅದೇನೆಂದರೆ ತಾವು ಶಿಕ್ಷಿತರು ಬೇರೆಯವರಿಂದ ಭಿನ್ನ ಎಂಬಂತ ಮನೋಧರ್ಮ. ಜಾತಿಯ ಆಧಾರದ ಮೇಲೆ ಪುರೋಹಿತ ವರ್ಗ ಅನುಸರಿಸಿದ ತಾರತಮ್ಯ ನೀತಿಯನ್ನು ಶಿಕ್ಷಿತ ವರ್ಗ ಅಶಿಕ್ಷಿತ ವರ್ಗದ ವಿರುದ್ಧ ಅನುಸರಿಸುವ ಮನೋಧರ್ಮ ಆರಂಭಗೊಂಡಿತು. ಅದೊಂದು ರೀತಿಯಲ್ಲಿ ನವ ಪುರೋಹಿತಶಾಹಿಯಾಗಿ ಪರಿಣಮಿಸಲಾರಂಭಿಸಿತು. ಈ ಆತಂಕ ಕುವೆಂಪು ಅವರನ್ನೂ ಕಾಡಿತು. ಅದನ್ನು 'ಜಲಗಾರ'ದ ಅದೇ ತರುಣರ ಮೂಲಕ ವ್ಯಕ್ತಪಡಿಸುತ್ತಾರೆ. ಮೊದಲಿಗೆ ಆದರ್ಶದ ಮಾತುಗಳನ್ನಾಡಿದ ತರುಣರು ಅಲ್ಲಿದ್ದ ಒಬ್ಬ ಕುರುಡು ತಿರುಕನ ವಿಷಯದಲ್ಲಿ ನಡೆದುಕೊಳ್ಳುವ ಬಗ್ಗೆ ಅದನ್ನು ವಿವರಿಸುತ್ತದೆ.

" ***ತಿರುಕ***

*ತಿರುಕ ಧರ್ಮರೇ!*

ಕಣ್ಣಿಲ್ಲ, ಹಸಿದಿಹೆನು, ಸಾಯುತಿಹೆನಪ್ಪಾ!

*ಪುಣ್ಯಾತ್ಮರೇ, ತಾಯ್ತಂದೆ, ಕಾಸು ಕೊಡಿರಪ್ಪಾ!*

***ಎರಡನೆ ತರುಣ***

ಕಾಸಿದೆಯೆ ನಿನ್ನ ಬಳಿ?

*(ಎಂದು ತಟಕ್ಕನೆ ಮೊದಲನೆ ತರುಣನ ಕಡೆಗೆ ತಿರುಗುತ್ತಾನೆ.*

*ಜೇಬಿನಲ್ಲಿ ಹಣದ ಸದ್ದಾಗುತ್ತದೆ.*

***ಮೊದಲನೆ ತರುಣ***

*ಹಾಗಲ್ಲ, ಮಿತ್ರ!*

*ಕೊಡುವುದನು ನೋಡಿ ಕೊಡಬೇಕು!*

*"ನರಮನುಜವತ್ಯಧಿಕವದರೊಳು*

*ಗುರುಹಿರಿಯರಿವರೆಂದು ದಾನ*

*ಕ್ಕರುಹಿದವರಲ್ಲೆಂದು ನೋಡದೆ ಮೂಢ ಮಾರ್ಗದಲಿ*

*ಕರೆದಪಾತ್ರಂಗಿತ್ತು ಪಾತ್ರನ*

*ಪರಿಹರಿಸಲೀಯರಡರಿಂ ಸಂ*

*ಹರಣವೈದುವುದಾರ್ಜಿಸಿದ ಧನವರಸ ಕೇಳೆಂದ!''*

*ಎಂಬ ವಿದುರನ ನೀತಿಯರಿಯೆಯಾ ನೀನು?*

*ಇವನೇನು ಕುರುಡನೇ? ಇವನು ಬಲು ಸೋಮಾರಿ!*

*ನೋಡನಿತು ಬಲಶಾಲಿಯಾಗಿಹನು? ನೋಡು!*

*ದುಡಿಯಬಾರದೆ ಇವನು? ಭಿಕ್ಷುಕರ ದೆಸೆಯಿಂದ*

*ದೇಶವೇ ಹಾಳಾಯ್ತು! (ಕುರುಡನ ಬಳಿಸಾರಿ)*

*ಲೋ! ನಿನ್ನ ಕಣ್ಣು*

*ಕುರುಡೇನೋ, ಠಕ್ಕ!''* [೪]

ಎಂದು ತಿರುಕನ ಕಣ್ಣುಗಳನ್ನು ಎಳೆದು ನೋಡುತ್ತಾನೆ. ತಿರುಕ ನೋವು ತಡೆಯಲಾರದೆ ಗೋಳಾಡುತ್ತಾನೆ. ನಂತರ ಜಲಗಾರ ಬಂದು ಬಿಡಿಸುತ್ತಾನೆ.

*''ಬಿಡಿರಪ್ಪಾ ! ಪಾಪ,*

*ಹೊಟ್ಟೆಗಿಲ್ಲದೆ ಬಿದ್ದು ಸಾಯುವವಗೇತಕೀ*

*ಗೋಳು?''* [೫]

ಎಂದು ತರುಣನನ್ನು ಜಲಗಾರ ಎಳೆಯುತ್ತಾನೆ. ಇದರಿಂದ ಕೋಪಗೊಂಡ ಮೊದಲನೆಯ ತರುಣ,

*''ಸೊಕ್ಕೇನೋ ನಿನಗೆ?..... ತಿಂದ ಸೊಕ್ಕೆ?*

*ಮೈ ಮುಟ್ಟುವೆಯ ಬಂದು!''* [೬]

ಎಂದು ಜಲಗಾರನನ್ನು ಒದ್ದು, ನೂಕಿ ಹೋಗುತ್ತಾನೆ. ನಂತರ ಹಸಿವಿನಿಂದ ಬಳಲುತ್ತಿದ್ದ ತಿರುಕನಿಗೆ ಜಲಗಾರ ತನ್ನ ಊಟವನ್ನು ನೀಡುತ್ತಾನೆ. ಮೊದಲಿಗೆ ಆದರ್ಶ ಸಮಾಜದ ಪ್ರತೀಕಗಳಂತೆ ಕಂಡು ಬಂದ ತರುಣರು ನಂತರದಲ್ಲಿ ನವ ಪುರೋಹಿತಾಶಾಹಿಯ ಹರಿಕಾರರಾದರು. ಜಲಗಾರನನ್ನು ''ಮೈಮುಟ್ಟುವೆಯ ಬಂದು!'' ಎಂದು ಕೇಳುವ ತರುಣರಿಗೂ ಪುರೋಹಿತ ವರ್ಗಕ್ಕೂ ಯಾವ ಅಂತರವೂ ಇದ್ದಂತೆ ಕಾಣುವುದಿಲ್ಲ. ತಾವು ಅಕ್ಷರ ಕಲಿತದ್ದರಿಂದ ಸಮಾಜದ ಅನ್ಯ ಜನರಿಗಿಂತ ಭಿನ್ನ ಎನ್ನುವ ಭಾವನೆ ಅವರಲ್ಲಿ ಮೂಡಲಾರಂಭಿಸಿದೆ. ಇದು ಪುರೋಹಿತಶಾಹಿಗಿಂತಲೂ ಅಪಾಯಕಾರಿಯಾದ ಬೆಳವಣಿಗೆ.

ಒಂದೆಡೆ ದಲಿತರನ್ನು ಪುರೋಹಿತಶಾಹಿಗಳು ದನ ತಿನ್ನುವ ಹೊಲಸು ಜನ ಎಂದು ತಮ್ಮಿಂದ ದೂರೀಕರಿಸುತ್ತಲೇ, ಅದೇ ದನ ತಿನ್ನುವ ಬ್ರಿಟೀಷರ ಮುಂದೆ ಕೈಕಟ್ಟಿ ವಿಧೇಯರಾಗಿ ನಿಲ್ಲುತ್ತಾರೆ. ಅಂತೆಯೆ ಒಂದೆಡೆ ಪುರೋಹಿತ ವರ್ಗ ಬೇರೆಯವರನ್ನು ಕೀಳಾಗಿ ಕಾಣುತ್ತಿದ್ದರೆ ಅದೆ ಕೆಳವರ್ಗದ ಶಿಕ್ಷಿತರು ತಮ್ಮವರಲ್ಲೇ ಅಶಿಕ್ಷಿತರನ್ನು ಕೀಳಾಗಿ ಕಾಣುತ್ತದೆ. ಅಂದರೆ ದಮನಕಾರಿ ಮನೋಧರ್ಮ ಯಾವ ವರ್ಗದಲ್ಲಿನವರಲ್ಲಾದರೂ ಮೂಡಬಹುದು. ಕೇವಲ ಅದಕ್ಕೊಂದು  ಅವಕಾಶ ಸೃಷ್ಟಿಯಾಗಬೇಕಷ್ಟೆ. ಅಕ್ಷರ ಕಲಿಕೆಯ ಮೂಲಕ ಆ ಅವಕಾಶ ಸೃಷಿಯಾಯಿತು.

ಅಕ್ಷರ ಜ್ಞಾನವನ್ನು ಸಮಾಜದ ಒಳತಿಗಾಗಿ ಬಳಸದೆ, ಅದನ್ನು ದಮನದ ಒಂದು ಅಸ್ತ್ರವಾಗಿ ಬಳಸಲು ಪುರೋಹಿತವರ್ಗದಂತೆಯೆ ಇತರೆ ವರ್ಗಗಳ ಯುವ ಜನರು ಕೂಡ ಅನುವಾಗಿರುವುದು ಆತಂಕಕಾರಿ ಸಂಗತಿ. ಇದನ್ನು ಅಂದೇ ಕುವೆಂಪು ಮನಗಂಡಿದ್ದಾರೆ.  ಅವರ ಪ್ರಕಾರ ಇದು ಪುರೋಹಿತಶಾಹಿಗಿಂತ ಆತಂಕಕಾರಿ ಬೆಳವಣಿಗೆ. ತರುಣರಿಗೆ ಮೊದಲು ತಿರುಕು ಒಬ್ಬ ಹಾರುವನಲ್ಲಿ ಭಿಕ್ಷೆಗೆ ಹೋದಾಗ,

*"ನೀ ಸತ್ತರೆನಗೇನೋ? ಮಡಿಬಟ್ಟೆ ಮುಟ್ಟುವೆಯ?*

*ಅದಕೆ ದೇವರು ನಿನ್ನ ಕಣ್ಣಿಂಗಿಸಿದ್ದು !"* [6]

ಎಂದು ಹೇಳಿ ಹೊರಟು ಹೋಗುತ್ತಾನೆ. ಆದರೆ ತರುಣರು ಅವನನ್ನು ದೈಹಿಕವಾಗಿ ನೋಯಿಸುತ್ತಾರೆ. ಆದರ್ಶದ ಅತಿರೇಕವನ್ನು ಪ್ರದರ್ಶಿಸುತ್ತಾರೆ. ತಾವು ಓದಿಕೊಂಡಿರುವುದರಿಂದ ಎದುರಿಗೆ ಸತ್ಯವನ್ನೇ ಕಂಡರೂ ಅದನ್ನು ಪರಿಕ್ಷಿಸದೆ ಒಪ್ಪಲಾಲರೆವು ಎಂದು ತಿರುಕನ ಕಣ್ಣುಗಳನ್ನು ಪರೀಕ್ಷಿಸಲು ಅವನಿಗೆ ನೋವುಂಟು ಮಾಡುತ್ತಾರೆ. ಕೊನೆಗೆ ಬಡವನಿಗೆ ಬಡವನೆ ಗತಿ ಎಂಬಂತೆ ಜಲಗಾರ ಅವನಿಗೆ ಅನ್ನ ನೀಡಬೇಕಾಗುತ್ತದೆ.

ಶಿಕ್ಷಿತ ವರ್ಗದ ಮನೋಧರ್ಮ ಇಂದಿಗೂ ಅಸ್ತಿತ್ವದಲ್ಲಿದೆ. ಸುಶಿಕ್ಷಿತರು ರೈತರನ್ನು ಬಡ ಜನರನ್ನು ಕೀಳಾಗಿ ಕಾಣುವುದು ಸಾಮಾನ್ಯ. ನಗರ ಜೀವನವೇ ಶ್ರೇಷ್ಠವೆಂದು ಹೇಳಿ ರೈತರನ್ನು ನಗರಮುಖಿಯಾಗಿ ಮಾಡುತ್ತಾರೆ. ಒಮ್ಮೆ ಅಕ್ಷರ ಕಲಿತು ನಗರ ಮುಖಿಯಾದ ಜನ ಮತ್ತೆ ಹಳ್ಳಿಗಳ ಕಡೆ ಬರುವುದು ಪವಾಡವೇ ಸರಿ. ರೈತನೆಂದರೆ ಅವರಿಗೆ ಅಸಡ್ಡೆ. ನಗರದಲ್ಲಿ ಎಂತಾ ಕೊಳಕು ಕೆಲಸದಲ್ಲಾದರೂ ಸರಿ ಬದುಕಲು ಸಿದ್ಧರಿರುತ್ತಾರೆಯೆ ಹೊರತು, ಹಳ್ಳಿಯಲ್ಲಿ ರೈತನಾಗಿ ಬದಕಲು ಇಷ್ಟಪಡುವುದಿಲ್ಲ. ಅವರ ಆಡಂಬರವನ್ನು ಕಂಡು ಹಳ್ಳಿಯ ಜನರೂ ನಗರಗಳಿತ್ತ ಮುಖ ಮಾಡುತ್ತಾರೆ. ನಗರದಲ್ಲಿ ಹೋಟೇಲಿನಲ್ಲಿ ತಟ್ಟೆ ತೊಳೆದಾದರೂ ಹೆಮ್ಮೆ ಪಡುತ್ತಾರೆ. ಆದರೆ ವ್ಯವಸಾಯ ಮಾತ್ರ ಅವರಿಗೆ ಒಗ್ಗದು.

ಶಿಕ್ಷಿತರಲ್ಲೂ ವರ್ಗಗಳು ಏರ್ಪಟ್ಟಿವೆ.  ಕಡಿಮೆ ಓದಿದವನಿಗೆ ಹೆಚ್ಚು ಓದಿದವನಿಂದ ಮರ್ಯಾದೆ ದೊರೆಯದು.  ಅದರಲ್ಲೂ ಈ ಐ.ಟಿ., ಬಿ.ಟಿ ಜನರಂತೂ ತಾವು ದೇವಲೋಕದಿಂದ ಬಂದ ಜನರಂತೆ ವರ್ತಿಸುವುದು ಸಾಮಾನ್ಯ. ಅವರ ಪ್ರಕಾರ ಇಡೀ ಸಮಾಜ ಬದುಕಿರುವುದು ಅವರಿಂದಲೇ. ಬೇರೆ ಉದ್ಯೋಗ ಮಾಡುವವರೆಲ್ಲ ಅವರ ಮುಂದೆ ತುಚ್ಛರು. ವಿದೇಶಿ ಕಂಪನಿಗಳ ಗುಲಾಮರಾಗುವ ಇವರು ಬೇರೆಯವರನ್ನು

ಗುಲಾಮರಂತೆ ಕಾಣುವುದು ವಿಪರ್ಯಾಸ. ತಮ್ಮದೇ ಆದ ಒಂದು ವರ್ಗವನ್ನು ಸೃಷ್ಟಿಸಿಕೊಂಡಿರುವ ಅವರು ಸಮಾಜದಲ್ಲಿ ಇತರರೊಂದಿಗೆ ಬೇರೆಯಲೂ ಹಿಂಜರಿಯುತ್ತಾರೆ. ತಮ್ಮ ಅಭಿವೃದ್ಧಿಯೇ ದೇಶದ ಅಭಿವೃದ್ಧಿ ಎಂದು ವಾದಿಸುತ್ತಾರೆ. ಫಲವತ್ತಾದ ಕೃಷಿ ಭೂಮಿಯನ್ನು ಅತಿ ಕಡಿಮೆ ಬೆಲೆಗೆ ಪಡೆದು ಅದರಲ್ಲಿ ಬೃಹತ್ ಕಟ್ಟಡಗಳನ್ನು ನಿರ್ಮಿಸಿ ಆನಂದಿಸುತ್ತಾರೆ. ಈ ಬೆಳವಣಿಗೆಯಿಂದ ಸಮಾಜದಲ್ಲಿ ಪುರೋಹಿತಶಾಹಿ ಅಸ್ಪೃಶ್ಯತೆಯ ಜೊತೆ ಜೊತೆಗೆ ಆರ್ಥಿಕ ಅಸ್ಪೃಶ್ಯತೆಯೂ ಆರಂಭವಾಗಿದೆ. ಒಂದೆಡೆ ಸಾಮಾನ್ಯ ಉದ್ಯೋಗಿಗಳು ಐದಾರು ಸಾವಿರ ಗಳಿಸಿದರೆ, ಇನ್ನೊಂದೆಡೆ ಐ.ಟಿ., ಬಿ.ಟಿಯ ಮೂಲಕ ಲಕ್ಷ ಸಂಪಾದನೆ ಪಡೆಯುತ್ತಿದ್ದಾರೆ. ಇದರಿಂದ ಆರ್ಥಿಕ ಕಂದರ ಹೆಚ್ಚುತ್ತಿದೆ. ಒಂದೆಡೆ ಲಕ್ಷ ಕೋಟಿಗಳ ಒಡೆಯರುಗಳ ಪಟ್ಟಿ ವರದಿಯಾದರೆ ಅದರ ಜೊತೆಯಲ್ಲೇ ಅನ್ನಕ್ಕಿಲ್ಲದೆ ಸಾಯುವವರ ಸಂಖ್ಯೆಗಳೂ ಏರುತ್ತಿದೆ. ಇದು ಮುಂದೊಂದು ದಿನ ರಕ್ತಕ್ರಾಂತಿಗೆ ಪ್ರೇರಕವಾಗಬಹುದು. ಆದ್ದರಿಂದಲೆ 'ಕಲ್ಕಿ' ಕವನದ ಮೂಲಕ ಕುವೆಂಪು ಎಚ್ಚರಿಸುವ ಪ್ರಯತ್ನ ಮಾಡುತ್ತಾರೆ.

ಯುವಜನಾಂಗದ ಈ ಹೊಸ ಪುರೋಹಿತಶಾಹಿಯು ಅನಾದಿ ಕಾಲದಿಂದ ನಡೆದುಕೊಂಡು ಬರುತ್ತಿರುವ ಪುರೋಹಿತಶಾಹಿಯನ್ನು ಹಿಂದಿಕ್ಕಿ, ಅದರ ಸ್ಥಳದಲ್ಲಿ ಬಂದು ಕೂರುವ ಆತಂಕವಿದೆ. ಅದೂ ಅಲ್ಲದೆ ನವ-ಪುರೋಹಿಸಶಾಹಿ ಏನಾದರೂ ಪ್ರಬಲವಾದರೆ ಎರಡು ಪುರೋಹಿತಶಾಹಿಗಳ ನಡುವೆ ಸಾಮಾನ್ಯನು ಸಿಕ್ಕು ನರಳುವಂತಾಗುತ್ತದೆ. ಅದೂ ಅಲ್ಲದೆ ಹೊರಗಿನವರು ನೀಡುವ ನೋವಿಗಿಂತ ನಮ್ಮವರೇ ನೀಡುವ ನೋವು ಹೆಚ್ಚು ನೋವುಂಟು ಮಾಡಬಲ್ಲದು. ಆದ್ದರಿಂದಲೇ ಜಲಗಾರ ಹೇಳುವುದು.

"*ದೇವರೇ, ದೇವರೆ!*
*ಶತ್ರುಗಳ ಕಾಟವಾದರು ಬೇಕು, ನಮಗಾಗಿ*
*ಮಿತ್ರರೆಂಬುವ ನೆವದಿ ಮರುಕ ತೋರುವ ಜನರ*
*ಕೃತ್ರಿಮದ ಕಾಟ ಬೇಡ! ಭಟ್ಟನಾದರೊ ಬೈದು*
*ಹೋದ. ಬಡಜನರಿಗಾಗಿ ಮರುಗುವ ಇವರು*
*ಭಿಕ್ಷುಕನ ಕಣ್ಣೀರಿದು, ಒದ್ದು, ತೆರಳಿದರು!*
....................."[8]

ನವ-ಪುರೋಹಿತಶಾಹಿಯ ಬಗ್ಗೆ ಕುವೆಂಪು ಅಂದು ನೀಡಿದ ಎಚ್ಚರಿಕೆ ಇಂದಿಗೂ ಪ್ರಸ್ತುತ. ಏಕೆಂದರೆ ಈ ಮನೋಧರ್ಮ ಮರುಕಳಿಸುತ್ತಲೇ ಇದೆ. ಶಿಕ್ಷಿತ ವರ್ಗ ಅಶಿಕ್ಷಿತ ವರ್ಗವನ್ನು ಕೀಳಾಗಿ ಕಾಣುವುದು ನಿಂತಿಲ್ಲ.

## ೩ . ೨ ಮೌಢ್ಯಗಳ ನವೀಕರಣ

ಇಂದು ಜಗತ್ತು ವಿಜ್ಞಾನದ ದೃಷ್ಟಿಯಿಂದ ಪ್ರಗತಿಯ ದೃಷ್ಟಿಯಿಂದ ತುಂಬಾ ಮಹತ್ತರವಾದ ಹಂತಗಳನ್ನು ತಲುಪಿದೆ. ಬಾಹ್ಯಕಾಶದಲ್ಲಿನ ಇತರ ಗ್ರಹಗಳಿಗೆ ಮಾನವ ಮತ್ತು ಮಾನವ ನಿರ್ಮಿತ ಯಂತ್ರಗಳ ಹೋಗಿಬರುವಷ್ಟು ವಿಜ್ಞಾನದಲ್ಲಿ ಪ್ರಗತಿಯಾಗಿದೆ. ಬೇರೆ ಕ್ಷೇತ್ರಗಳಲ್ಲೂ ಅಷ್ಟೇ ಮಹತ್ವದ ಗುರಿಗಳನ್ನು ತಲುಪಲಾಗಿದೆ. ಅದೆಷ್ಟೋ ಪವಾಡಗಳನ್ನು ಭೇದಿಸಲಾಗಿದೆ. ಶತಕೋಟಿಗಳಷ್ಟು ಹಿಂದಿನ ನಂಬಿಕೆಗಳಿಗೆ ಹೊಸ ವ್ಯಾಖ್ಯಾನ ಬರೆಯಲಾಗುತ್ತಿದೆ. ಇನ್ನೂ ಏನೇನೋ ಆಗುತ್ತಿದೆ. ಇದೆಲ್ಲದರ ನಡುವೆ ಒಂದು ಮಾತ್ರ ಖಚಿತವಾಗಿ ಬೇರೂರುತ್ತಲೇ ಇದೆ. ಅದೆಂದರೆ ದೇವರು, ಧರ್ಮದ ಬಗೆಗಿನ ನಂಬಿಕೆಗಳು. ವಿಶೇಷವಾಗಿ ನಮ್ಮ ದೇಶದಲ್ಲಿ.

ನಮ್ಮ ದೇಶದ ಜನ ದೇವರು, ಧರ್ಮದ ಬಗ್ಗೆ ಅದೆಷ್ಟು ನಂಬಿಕೆಯುಳ್ಳವರೆಂದರೆ ರಾಕೆಟ್ಟಿನಂತಹ ವಿಜ್ಞಾನದ ಮಹತ್ತರ ಸಾಧನೆಯ ಜೊತೆಯಲ್ಲಿಯೇ ಅದರ ಉಡಾವಣೆಗೆ ರಾಹುಕಾಲ, ಗುಳಿಕಕಾಲಗಳನ್ನು ನೋಡಿ ಉಡಾವಣೆ ಮಾಡಲಾಗುತ್ತದೆ. ಒಂದೆಡೆ ಶತಮಾನಗಳಿಂದ ನಡೆದುಕೊಂಡು ಬಂದಿದ್ದ ನಂಬಿಕೆಗಳು ಸುಳ್ಳೆಂದು ಸಾಬೀತಾಗುತ್ತಿದ್ದರೆ, ಇನ್ನೊಂದೆಡೆ ಅವುಗಳ ಬಗೆಗಿನ ನಂಬಿಕೆ ಬಲವಾಗುತ್ತಲೇ ಹೋಗುತ್ತಿದೆ. ಹಿಂದೆಂದಿಗಿಂತಲೂ ಇಂದು ಜನ ಗುಡಿಗಳ ಕಡೆಗೆ ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಮೈತುಂಬಾ ಬಟ್ಟೆ ಧರಿಸುವ ವಿವೇಚನೆ ಕಳೆದಿದ್ದರೂ ಕೈಗೆ ಒಂದು ಕಾಶಿದಾರ ಬಿಗಿಯುವುದನ್ನು ಮರೆಯುವುದಿಲ್ಲ. ಐ.ಟಿ., ಬಿ.ಟಿ ಇಂಜಿನಿಯರುಗಳೂ ಒಪ್ಪೊತ್ತು, ಶನಿವಾರ, ಉಪವಾಸ, ವ್ರತ, ಪೂಜೆಗಳನ್ನು ಮರೆಯುವುದಿಲ್ಲ. ಏನೆಲ್ಲ ಆಧುನಿಕತೆಯ ನಡುವೆಯೂ ದೈವಭಕ್ತಿ ಮಾತ್ರ ಕಿಂಚಿತ್ತೂ ಕುಂದಿಲ್ಲ. ಬದಲಾಗಿ ಅವುಗಳ ಬಗೆಗಿನ ನಂಬಿಕೆಗಳು ಬಲವಾಗುತ್ತಲೇ ಹೋಗುತ್ತಿವೆ. ದೇವರ ಗುಡಿಗಳ ಹುಂಡಿಗಳು ಹಿರಿದಾಗುತ್ತಲೇ ಹೋಗುತ್ತಿವೆ. ಮನುಷ್ಯ, ಮನಷ್ಯನ ನಡುವಿನ ನಂಬಿಕೆ ಕುಸಿಯುತ್ತಿರುವಾಗಲೇ ಕಲ್ಲು ಬಂಡೆಗಳ, ವಿಭೂತಿ, ನಾಮಗಳ, ಬಗೆಗಿನ ನಂಬಿಕೆ ಹೆಚ್ಚುತ್ತಲೇ ಹೋಗುತ್ತಿದೆ. ಇಷ್ಟೆಲ್ಲಾ ಏಕೆ ಕಳ್ಳರು ಕಳ್ಳತನಕ್ಕೆ ಹೋಗುವ ಮೊದಲು ಗುಡಿಯಲ್ಲಿ ದೇವರಿಗೆ ನಮಸ್ಕಾರ ಮಾಡಿಯೇ ಹೊರಡುತ್ತಾರೆ. ಆಶ್ಲೀಲ ಚಿತ್ರಗಳ ಆರಂಭದಲ್ಲಿ ದೇವರ ಚಿತ್ರ ತೋರಿಸಿ ಅದಕ್ಕೆ ವಿಜೃಂಭನೆಯಿಂದ ಪೂಜೆಯೂ ನಡೆಯುತ್ತದೆ.

ದೇವರು, ಧರ್ಮದ ವಿಷಯದಲ್ಲಿ ನಡೆಯುತ್ತಲಿರುವ ಸಂಗತಿಗಳು ಎಂಥವರನ್ನೂ ಗೊಂದಲಕ್ಕೆ ಈಡುಮಾಡುವಂತದ್ದು, ಮಾನವನ ಈ ಎಲ್ಲ ನಡವಳಿಕೆಗಳ ಹಿಂದಿರುವುದು ಐದು ಸಾವಿರ ವರ್ಷಗಳ ಪುರೋಹಿತಶಾಹಿ ಮನಸ್ಸುಗಳ ಪರಿಶ್ರಮ. ತಮ್ಮ ಅಸ್ತಿತ್ವಕ್ಕೆ ಮತ್ತು ಸಮಾಜದಲ್ಲಿ ತಮ್ಮ ಪೊಳ್ಳು ಹಿರಿಮೆಯನ್ನು ಮೆರೆಯಲು ಅವರು ರೂಪಿಸಿದ ಕಾರ್ಯತಂತ್ರ. ಜನಗಳ ಮನಸ್ಸಿನಲ್ಲಿ ದೇವರು, ಧರ್ಮದ ಹೆಸರಿನಲ್ಲಿ ಇನ್ನಿಲ್ಲದ ಭಯವನ್ನು ಹುಟ್ಟಿಸಿ ಅವೆರಡರ ಮಧ್ಯವರ್ತಿಯಾಗಿ ಪುರೋಹಿತ ವರ್ಗ ನಿಂತಿತು. ಸ್ವರ್ಗ ನರಕಗಳ ಪರಿಕಲ್ಪನೆಯನ್ನು ಮೂಡಿಸಿ ಜನರಲ್ಲಿ ಸಾವಿನ ನಂತರವೂ ಶಿಕ್ಷೆಯ ಭಯ ಉಂಟು ಮಾಡಿದರು. ಗುಡಿಗಳ ಬಳಿಗೆ

ಬರಗೊಡದೆ ಹೋದರೂ ಅಸ್ಪೃಶ್ಯರಲ್ಲಿ ಈ ನಂಬಿಕೆಗಳನ್ನು ಬೇರೂರಿಸುವಲ್ಲಿ ಅವರು ಸಫಲರಾದರು. ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಅದು ಬೇರೂರುವಂತೆ ನೋಡಿಕೊಂಡರು.

ಪುರೋಹಿತ ವರ್ಗ ಬಿತ್ತಿದ ಧಾರ್ಮಿಕ ನಂಬಿಕೆಗಳ ಬೀಜ ಎಷ್ಟರ ಮಟ್ಟಿಗೆ ಫಲ ನೀಡಿದೆಯೆಂದರೆ, ಕಂಪ್ಯೂಟರ್‌ಗೆ ಕುಂಕುಮವಿಟ್ಟು ಪೂಜಿಸುವ ಮನಸ್ಸುಗಳು ದೊರೆಯುತ್ತವೆ. ಅಂತೆಯೆ ಸಾವಿರಾರು ಪರಿಕರಗಳಿಂದ ನಡೆಯುವ ಯಂತ್ರಗಳೂ ಒಂದು ನಿಂಬೆ ಹಣ್ಣುಗಳನ್ನು ಕಟ್ಟಿಸಿಕೊಂಡರೇನೆ ಸುಗಮವಾಗಿ ಸಾಗುವುದೆಂಬ ನಂಬಿಕೆ ಪ್ರಬಲವಾಗಿದೆ. ಇಂತಹ ಮೌಢ್ಯಗಳನ್ನು ಮುರಿಯಲು ಹಲವಾರು ದಾರ್ಶನಿಕರು ಹಲವಾರು ರೀತಿಗಳಲ್ಲಿ ಪ್ರಯತ್ನಿಸಿದರೂ ಸಂಪೂರ್ಣವಾಗಿ ಸಫಲರಾಗಿಲ್ಲ. ಬದಲಾಗಿ ಜನರಿಂದ ದೂರವಾಗಿದ್ದ ಮೌಢ್ಯಗಳು ಮತ್ತೆ ಪುನರುಜ್ಜೀವನ ಪಡೆದು ವಿಜೃಂಭಿಸಲು ಆರಂಭವಾಗಿವೆ.

ಕುವೆಂಪು ಎಂದಿಗೂ ಮೌಢ್ಯಗಳನ್ನು ಸಹಿಸಿದವರಲ್ಲ. ಆದರೆ ಪುರೋಹಿತ ವರ್ಗ ಮೌಢ್ಯಗಳನ್ನು ಜನರಲ್ಲಿ ಯಾವ ಆಳಕ್ಕೆ ಬಿತ್ತಿದೆ ಎಂಬ ಅರಿವು ಅವರಿಗಿತ್ತು. 'ಜಲಗಾರ' ನಾಟಕದಲ್ಲಿ ಬರುವ ರೈತನ ಪಾತ್ರ ಇದಕ್ಕೆ ಪುಷ್ಟಿ ನೀಡುತ್ತದೆ. ಜಲಗಾರನೊಂದಿಗೆ ರೈತನ ಮಾತುಕತೆಯನ್ನು ಇಲ್ಲಿ ಗಮನಿಸಬಹುದು. ಮೊದಲಿಗೆ ಹಾಡುತ್ತ ಬರುವ ಹಾಡಿನಲ್ಲಿ ಅವನು ರೈತನ, ಅಂದರೆ ತನ್ನ ಮಹತ್ವವನ್ನು ಅರಿತಿರುವ ಮಾತುಗಳು ಬರುತ್ತವೆ.

*"ನೇಗಿಲ ಯೋಗಿಯು ನಾನು;*

*ಮಣ್ಣಿನ ಭೋಗಿಯು ನಾನು!*

*ಕೆರೆಗಳ ತೊರೆಗಳ ಗೆಳೆಯನು ನಾನು,*

*ಹೊಲಗಳ ಬನಗಳ ದೊರೆ ನಾನು.*

*ಹೊಯ್ಯುವೆ, ಗೆಯ್ಯುವೆ, ಕೊಯ್ಯುವೆ ನಾನು;*

*ಉಣ್ಣುವೆ, ಉಣಿಸೀಯುವೆ ನಾನು.*

*ನೇಗಿಲ ಗೆರೆಯೇ ತೋರುವುದೆನಗೆ*

*ಮುಕ್ತಿಯ ಹಾದಿಯನು;*

*ವೇದಗಳೆಲ್ಲಾ ನೆಗೆನೆಗೆದರಿಯದ*

*ಅಂತ್ಯದ ಆದಿಯನು.*

*ನನ್ನಿಯನರಿಯುವ ಕರ್ಮದಲಿ;*

*ಸೊಗವನು ಕಾಣುವ ಧರ್ಮದಲಿ!*

*ಬದುಕಿ ಬಾಳಿ ನಾ ಗೆಯ್ಯುವೆ ನಲಿಯುವೆ;*

*ಇಹಪರಗಳ ನಾ ಸಾಧಿಸುವೆ*

*ಬದುಕಿ; ಬಾಳಿ; ಕರ್ತವ್ಯವ ಮಾಡಿ;*

*ಮೇಲಾಗುವುದನು ಬೋಧಿಸುವೆ!*

*ನೇಗಿಲ ಯೋಗಿಯು ನಾನು!*

*ಮಣ್ಣಿನ ಭೋಗಿಯು ನಾನು!*

*(ಹಾಡನ್ನು ನಿಲ್ಲಿಸಿ, ತಾನು ತಂದ ಹಣ್ಣು ಕಾಯಿ ಕೆಳಗಿಟ್ಟು, ಉಟ್ಟ ಹೊಸ ಬಟ್ಟೆಗಳನ್ನು ನೋಡಿ*

*ನೋಡಿ ಸರಿಮಾಡಿಕೊಳ್ಳುತ್ತಾ)*

*ತಿರೆಯ ಪೊರೆದರನ್ನ ಸಹ ಕರ್ಮಿಗಳು, ಧರ್ಮಿಗಳು!*

*ನನ್ನವರ ಬಲದಿಂದಲೇ ದೊರೆಗಳಾಳಿದರು,*

*ಬಾಳಿದರು; ರಣವೀರರುಗಳನು ಹೂಳಿದರು.*

*ಕಬ್ಬಿಗರು ನಲ್ಲಬ್ಬಗಳ ಬರೆದು ಹಾಡಿದರು;*

*ಶಿಲ್ಪಿಗಳು ಕಲ್ಲಿನಲಿ ಕತೆಗಳನು ಕೆತ್ತಿದರು!*

*ಮಣ್ಣಾದ ನೇಗಿಲಾಶ್ರಯದಿ ಬೆಳೆದಿಹುದು,*

*ಉಳಿದಿಹುದು, ನಮ್ಮ ನಾಗರೀಕತೆ. ರೈತರೇ*

*ಭೂಮಿಗಿಳಿದಿಹ ಕಾಮಧೇನುಗಳು; ರೈತರೇ*

*ಧರೆಯೊಳಗಿಹ ಜಂಗಮ ಕಲ್ಪವೃಕ್ಷಗಳು''*[೯]

ಇಷ್ಟೆಲ್ಲಾ ಪ್ರಜ್ಞೆಯನ್ನು ಕಾಲಾನುಕ್ರಮದಲ್ಲಿ ಪಡೆದಿರುವ ರೈತ ಎಲ್ಲಾ ಮೌಢ್ಯಗಳನ್ನು ಮೀರಿರುವ ಹಾಗೆ ಕಂಡು ಬರುತ್ತಾನೆ. ಆದರೆ ಈ ಹಾಡನ್ನು ಹಾಡುತ್ತ ಅವನು ಹೊರಟಿರುವುದು ಮಾತ್ರ ಮೌಢ್ಯಗಳ ಕೂಪವಾದ ದೇವಸ್ಥಾನಕ್ಕೆ ಶಿವಗುಡಿಯ ಜಾತ್ರೆಗೆ. ಅಂದರೆ ಎಲ್ಲವನ್ನೂ ಮೀರಿದವರೂ, ತಿಳಿದವರೂ ಸಹ ದೇವರ ಹೆಸರಿನಲ್ಲಿ ಭಯ ನಂಬಿಕೆಗಳನ್ನು ಬಿಡಲು ಸಾಧ್ಯವಾಗಿಲ್ಲ. ಅಲ್ಲದೆ ಜಾತ್ರೆಯ ದಿನವೂ ಗುಡಿಸುವುದರಲ್ಲಿ ನಿರತನಾಗಿರುವ ಜಲಗಾರನನ್ನು ಕಂಡು ಅವನನ್ನೂ ಗುಡಿಗೆ ಬರುವಂತೆ ಕರೆಯುತ್ತಾನೆ. ಆದರೆ ಕಾಯಕದಲ್ಲೇ ದೇವರನ್ನು ಕಾಣುತ್ತಿರುವ ಜಲಗಾರ ಬರಲು ಒಪ್ಪುವುದಿಲ್ಲ. ಅಲ್ಲದೆ ತನ್ನನ್ನು ನಿರಾಕರಿಸಿರುವ ಗುಡಿಗೆ ತಾನು ಹೋಗುವುದಿಲ್ಲವೆಂದು ಹೇಳುತ್ತಾನೆ. ರೈತನನ್ನು ಅವನು ಕೇಳುವ ಪ್ರಶ್ನೆಗಳು ಇಡೀ ಮನುಕುಲ ತನ್ನನ್ನು ತಾನೇ ಕೇಳಬೇಕಾದ ಪ್ರಶ್ನೆಗಳು.

*''ಶಿವನ ಕಾಣಲು ನೀನು*

*ಗುಡಿಗೆ ಹೋಗುವೆಯೇನು? ನಿನ್ನ ನೇಗಿಲ ಗರೆಯ*

*ದಿವ್ಯ ದೇವಾಲಯದಿ ಶಿವನ ಕಾಣೆಯ ನೀನು?''*[೧೦]

ಆದರೆ ಈ ರೀತಿಯ ಪ್ರಜ್ಞೆ ಬಲಗೊಳ್ಳುತ್ತಾ ಹೋದಂತೆಲ್ಲ ಪುರೋಹಿತಶಾಹಿ ಮನಸ್ಸುಗಳು ಹೊಸ ತಂತ್ರಗಳ ಮೂಲಕ ಮೌಢ್ಯಗಳನ್ನು ಪುನರ್ ಸ್ಥಾಪಿಸುತ್ತಾರೆ. ಅದೇ ಈಗಿನ ಇಪ್ಪತ್ತೊಂದನೆಯ ಶತಮಾನದಲ್ಲೂ ನಡೆಯುತ್ತಿರುವುದು. ಮೌಢ್ಯಗಳ ನವೀಕರಣ. ಅದಕ್ಕೆ ಕೆಲವು ಮುಖ್ಯ ಕಾರಣಗಳನ್ನು ಗುರಿತಿಸಬಹುದು.

ಅ. ಪುರೋಹಿತಶಾಹಿಗಳು ಅಧಿಕಾರದ ಚುಕ್ಕಾಣಿ ಹಿಡಿದಿರುವುದು.

ಆ. ಜನಪ್ರತಿನಿಧಿಗಳು ದೇವರು, ಯಜ್ಞಗಳ ಮೊರೆಹೋಗಿರುವುದು.

ಇ. ದಲಿತರಲ್ಲೂ ದೇವರು, ಧರ್ಮದ ಬಗೆಗಿನ ನಂಬಿಕೆ ಹೆಚ್ಚಾಗಿರುವುದು.

## ಅ. ಪುರೋಹಿತಶಾಹಿಗಳು ಅಧಿಕಾರದ ಚುಕ್ಕಾಣಿ ಹಿಡಿದಿರುವುದು.

ಕೇವಲ ಪೌರೋಹಿತ್ಯ ಮಾಡಿಕೊಂಡು, ಗುಡಿಗೋಪುರಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಪುರೋಹಿತವರ್ಗ ಇರುತ್ತಿತ್ತು. ರಾಜನಿಗೆ ರಾಜ್ಯಪಾಲನೆಯಲ್ಲಿ, ಧರ್ಮ ರಕ್ಷಣೆಯ ವಿಷಯದಲ್ಲಿ ಸಲಹೆ ನೀಡುತ್ತ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಅವರು ಅಧಿಕಾರದ ಗದ್ದುಗೆ ಏರಿದ್ದಾರೆ. ಅವರ ಸಿದ್ಧಾಂತಗಳನ್ನು ಅಧಿಕಾರರೂಢ ವರ್ಗದಿಂದ ಅನುಷ್ಠಾನಗೊಳಿಸುವ ಬದಲು ಅವರೇ ಅಧಿಕಾರ ಸ್ಥಾನದಿಂದ ಅದನ್ನು ಸಾಧಿಸುತ್ತಿದ್ದಾರೆ. ಧರ್ಮದ ಹೆಸರಿನಲ್ಲಿ ಜನರಲ್ಲಿ ನಂಬಿಕೆ ಹುಟ್ಟಿಸುವ ಮೂಲಕ ಅವರು ಚುನಾವಣೆಗಳನ್ನು ಗೆದ್ದು ಗದ್ದುಗೆ ಹಿಡಿದಿದ್ದಾರೆ. ಇದರಿಂದ ಜನರಲ್ಲಿ ಮೌಢ್ಯಗಳನ್ನು ಮರುಸ್ಥಾಪಿಸುವ ಅವರ ಉದ್ದೇಶ ಈಡೇರುವುದ ಬಲು ಸುಲಭವಾಗಿದೆ. ಅದನ್ನು ಸಾಧಿಸಲು ಅವರು ಮುಖ್ಯವಾಗಿ ಕೈಗೊಳ್ಳುವ ಮಾರ್ಗವೆಂದರೆ ಇತಿಹಾಸಗಳನ್ನು ತಿರುಚುವುದು, ಪುರಾಣ ಪುರುಷರನ್ನು ಐತಿಹಾಸಿಕ ಎಂದು ಪ್ರತಿಪಾದಿಸುವುದು ಮುಂತಾದವು. ದೇವಾಲಯ, ದೇವರ ಹೆಸರಿನಲ್ಲಿ ಅನುದಾನಗಳನ್ನು ಬಿಡುಗಡೆಮಾಡಿ ಅವುಗಳನ್ನು ಪುನರುಜ್ಜೀವನಗೊಳಿಸಲಾಗುತ್ತದೆ, ತಮ್ಮ ಅಧಿಕಾರವನ್ನು ಉಪಯೋಗಿಸಿ ಪ್ರಗತಿಪರ ಮನಸ್ಸುಗಳನ್ನು ಸದೆಬಡೆಯುವ ಕಾರ್ಯ ನಿರಂತರ ನಡೆಯುತ್ತದೆ. ಸುಳ್ಳನ್ನು ಪದೇ ಪದೇ ಹೇಳಿ ನಿಜವಾಗಿಸುವಂತೆ ಮೌಢ್ಯವನ್ನು ಪ್ರತಿ ದಿನ ಹರಡುವ ಮೂಲಕ ಅದನ್ನು ಸತ್ಯವಾಗಿ ಪರಿಣಮಿಸಲಾಗುತ್ತಿದೆ. ಅದರ ಪರಿಣಾಮವಾಗಿಯೇ ಅಬ್ದುಲ್ ಕಲಾಂರಂತಹ ಪ್ರಾಜ್ಞರು ಕೂಡ ತಮ್ಮ ಭಾಷಣಗಳಲ್ಲಿ 'ಮನುಸ್ಮೃತಿ'ಯನ್ನು ಉಲ್ಲೇಖಿಸುವುದನ್ನು ನಾವು ಕಾಣುವುದು.

ಇದೆಲ್ಲದರ ಪರಿಣಾಮಗಳೆ ಇಂದು ನಾವು ನೋಡುತ್ತಿರುವ ನವ ಪುರೋಹಿತಶಾಹಿ ಮತ್ತು ಮತ್ತೆ ಜೀವ ಪಡೆಯುತ್ತಿರುವ ಮೌಢ್ಯಗಳು. ಇಂದು ಹಿಂದೆಂದಿಗಿಂತಲೂ ಹೆಚ್ಚು ಜನ ದೇವಾಲಯಗಳಿಗೆ ತೆರಳುತ್ತಿದ್ದಾರೆ. ತಿರುಪತಿಯಂತಹ ಸ್ಥಳಗಳಂತೂ ಭಕ್ತರಿಂದ ತುಂಬಿಹೋಗುತ್ತಿದೆ. ಹಿಂದೆಂದೂ ಕೇಳರಿಯದ ಮಟ್ಟದಲ್ಲಿ ಕಾಣಿಕೆಗಳು ಹುಂಡಿಯಲ್ಲಿ ಬೀಳುತ್ತಿವೆ. ತಂತ್ರಜ್ಞಾನ ಯುಗದಲ್ಲೂ ಅದಕ್ಕಿಂತಲೂ ದುಪ್ಪಟ್ಟು ವೇಗದಲ್ಲಿ ಮೌಢ್ಯಗಳು

ಜನರನ್ನು ಆವರಿಸಿಕೊಳ್ಳುತ್ತಿವೆ. ಇದರಿಂದ ಉಬ್ಬಿ ಹೋಗುತ್ತಿರುವ ಪುರೋಹಿತಶಾಹಿಗಳು ಮತ್ತೆ ಸಮಾಜದಲ್ಲಿ ತಮ್ಮ ಪಾರುಪತ್ಯವನ್ನು ಹೇರುವ ಹುರುಪಿನಲ್ಲಿದ್ದಾರೆ. ಮತ್ತೆ ಇಡೀ ಸಮಾಜವನ್ನು ತಮ್ಮ ಸುಳ್ಳು ಮಂತ್ರಗಳ, ಆಚರಣೆಗಳ ಅನುಷ್ಠಾನವನ್ನು ಹಿಂದೆಂದಿಗಿಂತಲೂ ಪ್ರಬಲವಾಗಿ ಮಾಡುವ ಆಶಾಭಾವನೆ ಹೊಂದುತ್ತಿದ್ದಾರೆ. ಪುರೋಹಿತ ವರ್ಗ ಕೇವಲ ಅಲ್ಪಸ್ವಲ್ಪ ಆಡಳಿತದ ಅವಕಾಶ ದೊರೆತರೂ ಅದನ್ನು ಸದುಪಯೋಗ ಪಡಿಸಿಕೊಂಡು ಸಾಗುತ್ತಿರುವುದೇ ಇದಕ್ಕೆಲ್ಲ ಕಾರಣ.

## ಆ. ಜನಪ್ರತಿನಿಧಿಗಳು ದೇವರು, ಯಜ್ಞಗಳ ಮೊರೆಹೋಗಿರುವುದು

ಪುರೋಹಿತಶಾಹಿ ಮನಸ್ಸಿನ ವ್ಯಕ್ತಿಗಳು ಅಧಿಕಾರಕ್ಕೆ ಬಂದಾಗ ಅವರ ಸಿದ್ಧಾಂತಗಳನ್ನು ಪ್ರತಿಪಾದಿಸುವುದನ್ನು ನಾವು ಸಾಮಾನ್ಯವಾಗಿ ಕಂಡಿದ್ದೇವೆ. ಆದರೆ ಶತಮಾನಗಳಿಂದ ಪುರೋಹಿತಶಾಹಿಯ ದಬ್ಬಾಳಿಕೆಗೆ ಗುರಿಯಾದ ಶೂದ್ರರೂ ಮೌಢ್ಯಗಳ ಪ್ರಚಾರದಲ್ಲಿ ತೊಡಗಿರುವುದನ್ನು ನಾವು ಇತ್ತೀಚಿನ ದಿನಗಳಲ್ಲಿ ನೋಡುತ್ತೇವೆ. ನಮ್ಮನ್ನಾಳುವ ಜನ ದಿನಕ್ಕೊಂದು ಗುಡಿಯಲ್ಲಿ ಕಂಡ ಕಂಡ ಸ್ವಾಮಿಜಿಗಳ ಕಾಲಿಗೆರಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಅಧಿಕಾರ ಉಳಿಸಿಕೊಳ್ಳಲು ಮೌಢ್ಯಗಳ ಮೊರೆಹೋಗಿರುವುದು ವಿಷಾದನೀಯ, ಖಂಡನೀಯ. ಆದರೆ ಜನಪ್ರತಿನಿಧಿಗಳಿಗೆ ಇದರ ಪರಿವೆ ಇಲ್ಲ. ಅವರಿಗೆ ಅವರ ಸ್ವಾರ್ಥ ಸಾಧನೆಯೇ ಮುಖ್ಯವಾಗಿದೆ. ಆದರೆ ಅದರಿಂದ ಒಂದಂತು ಸ್ಪಷ್ಟ.

"........ ಬ್ರಾಹ್ಮಣರ ಕಾಲುಗಳನ್ನು ಸಾರ್ವಜನಿಕವಾಗಿ ತೊಳೆಯುವ ಕೈಗಳು ಶೂದ್ರರನ್ನೂ, ದಲಿತರನ್ನೂ, ಒದೆಯಬಲ್ಲ ಕಾಲುಗಳ ಜೊತೆಗೇ ಇರುತ್ತವೆ."[೧೧]

ಇದರಿಂದ ಪುರೋಹಿತ ವರ್ಗಕ್ಕೆ ತನ್ನ ಕಾರ್ಯ ಸಾಧನೆಗೆ ಸಹಾಯಕವಾಗಿದೆ. ನಮ್ಮ ಜನಪ್ರತಿನಿಧಿಗಳ ಅಧಿಕಾರ ಲಾಲಸೆ ಎಲ್ಲಿಯವರೆಗೆ ಮುಟ್ಟಿದೆಯೆಂದರೆ ಜಾತ್ಯಾತೀಯ ಹೆಸರಿನ ಪಕ್ಷ ಕೋಮುವಾದಿ ಪಕ್ಷದೊಂದಿಗೆ ಕೈಜೋಡಿಸಿ ಅಧಿಕಾರ ನಡೆಸುತ್ತಿದೆ. ಇದರಿಂದ ಪುರೋಹಿತಶಾಹಿ ಮನೋಧರ್ಮ ಬಲವಾಗುತ್ತಿದೆ.

ಒಟ್ಟಿನಲ್ಲಿ ಹೇಳುವುದಾದರೆ ಇಂದು ಮೌಢ್ಯಗಳು ನವೀಕರಣಗೊಳ್ಳುತ್ತಿರುವುದಕ್ಕೆ ಒಂದು ಬಲವಾದ ಕಾರಣ ರಾಜಕಾರಣವೂ ಹೌದು. ರಾಜಕೀಯದ ಮೂಲಕ ಅಧಿಕಾರಸ್ಥ ಮನಸ್ಸುಗಳು ಮತ್ತು ಪುರೋಹಿತಶಾಹಿ ಮನೋಭಾವ ಎರಡೂ ಒಟ್ಟುಗೂಡಿದಾಗ ಪುರೋಹಿತ ವರ್ಗವೇ ತನ್ನ ಕಾರ್ಯ ಸಾಧನೆಯಲ್ಲಿ ಮೇಲುಗೈ ಸಾಧಿಸುತ್ತದೆ. ಇದು ಇತಿಹಾಸದಿಂದ ತಿಳಿದು ಬಂದಿರುವ ಸತ್ಯ.

## ಇ. ದಲಿತರಲ್ಲೂ ದೇವರು, ಧರ್ಮದ ಬಗೆಗಿನ ನಂಬಿಕೆ ಹೆಚ್ಚಾಗಿರುವುದು.

ಮೊದಲಿನಿಂದ ದಲಿತರನ್ನು ಅಸ್ಪೃಶ್ಯರೆಂದು ಕರೆದು ಅವರನ್ನು ಕೀಳಾಗಿಯೇ ಕಾಣಲಾಗುತ್ತಿತ್ತು ಮತ್ತು

ಕಾಣಲಾಗುತ್ತಿದೆ. ಅವರನ್ನು ಬಾವಿಗಳಿಂದ, ಕೆರೆಗಳಿಂದ ಊರಿನಿಂದಲೇ ದೂರವಿಡಲಾಗಿತ್ತು. ಅಂತೆಯೇ ಗುಡಿಗಳಿಂದಲೂ. ಇಷ್ಟೆಲ್ಲ ಆದರೂ ಅವರು ತಾಂತ್ರಿಕವಾಗಿ ಹಿಂದುಗಳಾಗಿರುವಂತೆಯೆ ನೋಡಿಕೊಂಡರು. ದಲಿತರಲ್ಲೂ ಹಿಂದೂ ದೇವರು, ದೇವತೆಗಳ ಬಗ್ಗೆ ಭಯ ಭಕ್ತಿಯಿರುವಂತೆ ಕಾಳಜಿ ವಹಿಸಿದರು. ಮೊದಲೇ ಅಕ್ಷರ ವಂಚಿತರಾಗಿದ್ದ ದಲಿತ ವರ್ಗ ಪುರೋಹಿತಶಾಹಿಗಳ ಹುನ್ನಾರಗಳನ್ನು ತಿಳಿಯದೆ ಅವರ ಮೌಢ್ಯಗಳನ್ನು ನಂಬಿದರು. ಅವುಗಳನ್ನೇ ಆಚರಣೆಗೆ ತಂದರು. ಆದರೆ ಒಮ್ಮೆ ಕಲಿಕೆಯ ಅವಕಾಶಗಳು ದೊರೆತಾಗ ಅಸ್ಪೃಶ್ಯತೆ ವಿರುದ್ಧ ದಲಿತರು ಬಂಡೆದ್ದರು. ತಮಗೂ ಎಲ್ಲರಂತೆ ಬದುಕುವ ಅವಕಾಶ ಬೇಕೆಂದು ಆಗ್ರಹಿಸಿದರು. ಇಂತಹ ಸಮಯದಲ್ಲಿ ಅಂಬೇಡ್ಕರಂತಹ ದಲಿತರು ಸಮಾಜದ ಮುಖ್ಯವಾಹಿನಿಗೆ ಬಂದರು. 'ಮನುಸ್ಮೃತಿ'ಯನ್ನು ಸುಟ್ಟರು. ಬೌದ್ಧ ಮತದ ಕಡೆಗೆ ಹೊರಟರು. ಆದರೆ ಅದು ಕೇವಲ ಬೆರಳೆಣಿಕೆಯಷ್ಟು ಸಂಖ್ಯೆಯಲ್ಲಿ ಮಾತ್ರ. ದೊಡ್ಡ ಪ್ರಮಾಣದ ದಲಿತರು ಶಾಪ, ನರಕಗಳ ಪರಿಕಲ್ಪನೆಗಳನ್ನು ತಮ್ಮ ತಲೆಯಿಂದ ತೆಗೆದು ಹಾಕಲು ಸಾಧ್ಯವಾಗಲೇ ಇಲ್ಲ. ಅವರು ಹಿಂದುಗಳಾಗಿಯೇ ಉಳಿದರು. ಅದರ ಹಿಂದೆ ಕೆಲಸ ಮಾಡಿದ್ದು ಪುರೋಹಿತಶಾಹಿಯ ಮೌಢ್ಯಗಳಾದ ಪಾಪ, ಪುನರ್ಜನ್ಮ, ಹಣೆಬರಹ ಮತ್ತು ಇವುಗಳನ್ನು ಸಮರ್ಥಿಸಲು ಬರೆಯಲ್ಪಟ್ಟ ಪುರಾಣಗಳು, ಶಾಸ್ತ್ರಗಳು ಮುಂತಾದವು.

ಅದೇ ಅಲ್ಲದೆ ಪುರೋಹಿತ ವರ್ಗ ತನ್ನ ಸಮುದಾಯದ ಜನಸಂಖ್ಯೆಯನ್ನು ಕಳೆದುಕೊಳ್ಳದೆ ಇರಲು ಬೇರೆ ಧರ್ಮಗಳ ಬಗ್ಗೆ ತಪ್ಪು ಕಲ್ಪನೆಗಳನ್ನು ಮೂಢಿಸುತ್ತಾ, ಜೊತೆಗೆ "ಹಿಂದೂ ನಾವೆಲ್ಲ ಒಂದು" ಎಂಬ ಹೊಸ ಮಂತ್ರವನ್ನು ಪಠಿಸಿತು. ವಿಶೇಷವಾಗಿ ಮುಸ್ಲಿಮರ ವಿರುದ್ಧ ಹೋರಾಡಲು ನಾವೆಲ್ಲಾ ಒಂದಾಗಬೇಕೆಂದು ಕರೆ ಕೊಟ್ಟಾಗ ಅವರ ತಂತ್ರಕ್ಕೆ ದಲಿತರೂ ಬಲಿಯಾದರು. ದಲಿತರೂ ತಮ್ಮನ್ನು ತಾವು ಸಮಗ್ರ ಹಿಂದೂ ಜನಾಂಗದ ಭಾಗವಾಗಿ ಭಾವಿಸಿದರು. ಕ್ರಮೇಣ ದಲಿತರಿಗೂ ಸ್ವಲ್ಪ ಪ್ರಮಾಣದ ದೇವಾಲಯದ ಪ್ರವೇಶ ದೊರೆತಾಗ ಅವರೂ ಮೌಢ್ಯಗಳನ್ನು ಮೈಗೂಡಿಸಿಕೊಂಡರು. ಜೊತೆಗೆ ಪುರೋಹಿತವರ್ಗ ಕಾಲಕಾಲಕ್ಕೆ ಮೌಢ್ಯಗಳ ನವೀಕರಣ ಕೈಗೊಂಡಾಗ ಅವುಗಳನ್ನು ಪ್ರಶ್ನಿಸಲು ಅಶಕ್ತರಾದರು. ಪರಿಣಾಮ ಇಂದು ಹಿಂದೂ ಹೆಸರಿನಲ್ಲಿ ತ್ರಿಶೂಲ ಹಿಡಿದು ಹೋರಾಡುವ ಕೋಮುವಾದಿಗಳಲ್ಲಿ ದಲಿತರೂ ಸೇರ್ಪಡೆಯಾಗಿದ್ದಾರೆ.

ದಲಿತರನ್ನು ಪುರೋಹಿತಶಾಹಿ ವರ್ಗ ಇತ್ತೀಚಿನ ದಿನಗಳಲ್ಲಿ ಓಲೈಸಲು ಮುಖ್ಯ ಕಾರಣ ದಲಿತರ ಸಂಖ್ಯಾಬಲ. ಆದ್ದರಿಂದಲೇ ತೋರಿಕೆಗೆ ಹಿಂದೂಗಳೆಲ್ಲ ಒಂದು ಎಂದು ನಾಟಕ ಶುರು ಇಟ್ಟಿದ್ದಾರೆ. ಇಲ್ಲವಾದರೆ ಅವರ ಸಂಖ್ಯಾಬಲ ಕುಸಿದು ಪುರೋಹಿತಶಾಹಿಯ ಸಂಖ್ಯೆಯು ಮುಸ್ಲಿಮರಷ್ಟೇ ಆಗುತ್ತದೆಂಬ ಆತಂಕ ಅವರಿಗೆ. ಅವರ ತಂತ್ರಗಳಿಗೆ ಬಲಿಯಾಗಿರುವ ದಲಿತರು ಇಂದು ಬ್ರಾಹ್ಮಣರೂ ನಾಚುವಷ್ಟು ವಿಜೃಂಬನೆಯ ಪೂಜೆಗಳನ್ನು ಕೈಗೊಳ್ಳುತ್ತಿದ್ದಾರೆ. ದಿನಂಪ್ರತಿ ಪೂಜೆಗಳಿಗೆ ಇಳಿದಿದ್ದಾರೆ. ಹಿಂದೆಂದಿಗಿಂತಲೂ ದಲಿತರಲ್ಲಿ ಭಕ್ತಿ ಇಂದು ಹೆಚ್ಚಾಗಿದೆ. ಜೊತೆಗೆ ಮೌಢ್ಯವೂ ಅದೇ ಪ್ರಮಾಣದಲ್ಲಿ ಬೆಳೆದಿದೆ. ದಲಿತರೂ ನಿಯಮಿತವಾಗಿ ತಿರುಪತಿ, ಧರ್ಮಸ್ಥಳಗಳಿಗೆ

ಹೋಗುತ್ತಿದ್ದಾರೆ. ದಿನ ಬೆಳಗಾದರೆ ವಿಭೂತಿ ಕುಂಕುಮಗಳನ್ನು ಬಳಿದುಕೊಂಡು ತಾವು ಹಿಂದೂಗಳೆಂದು ಬೀಗುತ್ತಾ ನಡೆದಾಡುತ್ತಿದ್ದಾರೆ. ಅಯೋಧ್ಯೆಯಲ್ಲಿ ರಾಮಮಂದಿರ ಕಟ್ಟುವ ಕನಸು ಕಾಣುತ್ತಿದ್ದಾರೆ. ಆದರೆ ಇದೆಲ್ಲ ಪುರೋಹಿತಶಾಹಿಯ ಕುತಂತ್ರದ ಫಲ ಎಂದು ಮಾತ್ರ ಅವರು ಅರಿಯಲು ವಿಫಲರಾಗಿದ್ದಾರೆ. ಅವರನ್ನು ಅನ್ಯ ಧರ್ಮೀಯರ ವಿರುದ್ಧ ದಾಳಗಳಾಗಿ ಉಪಯೋಗಿಸಲಾಗುತ್ತಿದೆ. ಅವರ ಕೆಲಸ ಮುಗಿದ ಮೇಲೆ ಅದೇ ಹಳೆಯ ತುಳಿತ ಖಚಿತ ಎಂದು ದಲಿತರು ತಿಳಿಯಲಾರದೆ ಹೋಗುತ್ತಿದ್ದಾರೆ.

ಪುರೋಹಿತಶಾಹಿಯ ಮೌಢ್ಯಗಳನ್ನು ದಲಿತರೂ ಹೃದಯ ಪೂರ್ವಕವಾಗಿ ಸ್ವೀಕರಿಸುತ್ತಿರುವುದು ಆತಂಕಕಾರಿ ವಿಚಾರ. ಆದರೆ ಇದು ವಾಸ್ತವ. ಈ ಎಲ್ಲ ಬೆಳವಣಿಗೆಗಳಿಂದ ಒಂದಂತು ಸ್ಪಷ್ಟವಾಗುತ್ತದೆ. ಅದೆಂದರೆ ಪುರೋಹಿತಶಾಹಿ ಈಗ ಕೇವಲ ಒಂದು ಜಾತಿಯಾಗಿ ಉಳಿದಿಲ್ಲ. ಅದೊಂದು ಮನೋಧರ್ಮವಾಗಿ ಎಲ್ಲೆಡೆ ವ್ಯಾಪಿಸಿದೆ. ಅದರಲ್ಲಿ ಎಲ್ಲ ಜಾತಿಯವರೂ, ಪಂಗಡಗಳವರೂ ಸೇರಿಕೊಂಡಿದ್ದಾರೆ. ಜನರಲ್ಲಿ ಮೌಢ್ಯಗಳನ್ನು ಬಿತ್ತಿ ಅವರನ್ನು ತಮ್ಮ ಉದ್ದೇಶಗಳಿಗೆ ಬಳಸಿಕೊಳ್ಳಲು ಮುಂದಾಗಿದ್ದಾರೆ. ಇದರಿಂದ ಒಂದು ಇಡೀ ಸಮಾಜನ್ನು ಭ್ರಷ್ಟಾಚಾರದಲ್ಲಿ ಕಂದಾಚಾರದಲ್ಲಿ ಮತ್ತು ಕೋಮು ದ್ವೇಷದ ದಳ್ಳುರಿಯಲ್ಲಿ ಉರಿದು ಹೋಗುವ ಆತಂಕ ಸೃಷ್ಟಿಯಾಗಿದೆ. ಇದರ ವಿರುದ್ಧ ಧ್ವನಿ ಎತ್ತುವವರನ್ನು ಹತ್ತಿಕ್ಕುವ ಕಾರ್ಯ ನಿರಂತರವಾಗಿ ನಡೆಯುತ್ತ ಬಂದಿದೆ. ದಮನಕಾರಿ ನೀತಿಗಳು ಸಲೀಸಾಗಿ ಜಾರಿಯಾಗುತ್ತಿವೆ. ಕಾರಣ, ಪುರೋಹಿತಶಾಹಿಯ ಮನೋಧರ್ಮ ಎಲ್ಲೆಡೆ ವ್ಯಾಪಿಸಿರುವುದರಿಂದ ಹಳೆಯ ಮೌಢ್ಯಗಲಳೆಲ್ಲ ನವೀಕರಣಗೊಂಡು ಹೊಸ ಬಗೆಯಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುತ್ತಿವೆ. ಮಠಾಧೀಶರ, ಸ್ವಾಮಿಗಳ ನಿರ್ದೇಶನದಂತೆ ಸರ್ಕಾರಗಳು ಕಾರ್ಯ ನಿರ್ವಹಿಸುವುದಕ್ಕಿಂತ ದೊಡ್ಡ ಮೌಢ್ಯ ಬೇರೊಂದಿರಲಾರದು. ಆದರಿಂದ ಹೊರಬರಬೇಕಾದ ಅನಿವಾರ್ಯತೆ ಇದೆ.

## ೩ . ೩ ಪ್ರಚಲಿತ ವರ್ಗ ಸಂಘರ್ಷ

ಭಾರತದಲ್ಲಿ ವರ್ಣ ತಾರತಮ್ಯದ ಫಲವಾಗಿ ವರ್ಗ ತಾರತಮ್ಯವೇರ್ಪಟ್ಟಿದೆ. ವರ್ಣಾಶ್ರಮ ನಿಯಮದ ಅಡಿಯಲ್ಲಿ ಹಣ ಸಂಗ್ರಹಣೆ ಕೇವಲ ಕೆಲವು ವರ್ಗಗಳಿಗೆ ಮಾತ್ರ ಸೀಮಿತವಾಗಿತ್ತು. ಅದುದರಿಂದ ಹಣ ಕೇವಲ ಕೆಲವರಲ್ಲಿ ಮಾತ್ರ ಕ್ರೂಡೀಕರಣಗೊಂಡಿತು. ಅದು ಕ್ರಮೇಣ ವರ್ಗ ತಾರತಮ್ಯಕ್ಕೆ ಎಡೆಮಾಡಿಕೊಟ್ಟಿತು. ಹಣ, ಆಸ್ತಿ ಕೇವಲ ಕೆಲವರ ಪಾಲಾಗುತ್ತಾ ಬಂದದ್ದರಿಂದ ಕೆಲವರು ಅತೀ ಶ್ರೀಮಂತಿಕೆಗೆ ಏರಿದರೆ, ಇನ್ನು ಕೆಲವರು ಅತೀ ಬಡತನದ ಮಟ್ಟದಲ್ಲಿಯೇ ಉಳಿದರು. ಒಂದು ರೀತಿಯಲ್ಲಿ ಆರ್ಥಿಕ ಅಸ್ಪೃಶ್ಯತೆಗೆ ನಾಂದಿ ಹಾಡಿದಂತಾಯಿತು. ಏಕೆಂದರೆ ಬಡವರ ಶ್ರೀಮಂತರ ನಡುವಿನ ಅಂತರ ಭೂಮಿ ಆಕಾಶಗಳಷ್ಟಾಯಿತು. ಇದರಿಂದ ಬಡವರ ಶೋಷಣೆ ಆರಂಭವಾಯಿತು.

ಪ್ರಸ್ತುತ ಸಂದರ್ಭದಲ್ಲಿ ದೇಶದಲ್ಲಿ ನಡೆಯುತ್ತಿರುವ ಘಟನೆಗಳು ಆಘಾತಕಾರಿಯಾಗಿವೆ. ಇದ್ದವರಿಗೆ

ಇನ್ನೂ ಆಸೆ ಎಂಬಂತೆ ಕೋಟ್ಯಾಂತರ ರೂಪಾಯಿ ಆಸ್ತಿ ಹೊಂದಿರುವವರು ತಮ್ಮ ಆಸ್ತಿಯನ್ನು ವಿಸ್ತರಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಅದಕ್ಕೆ ತಾಜಾ ಉದಾಹರಣೆ ಎಂದರೆ ಎಸ್.ಇ.ಜೆಡ್. ಉದ್ಯೋಗ ಸೃಷ್ಟಿಯ ಹೆಸರಿನಲ್ಲಿ ಉದ್ಯಮಗಳನ್ನು ಪ್ರಾರಂಭಿಸಲು ರೈತರ ಭೂಮಿಯನ್ನು ಕಸಿದುಕೊಳ್ಳುವ ಹುನ್ನಾರ. ಇದರಿಂದ ದೇಶದ ಆಸ್ತಿಯೆಲ್ಲ ಕೆಲವೇ ಜನರ ಕೈಸೇರಿ ಉಳಿದವರೆಲ್ಲ ಕೇವಲ ಅವರ ಕೂಲಿಗಳಾಗಿ ಉಳಿಯುವ ಆತಂಕ ಇಂತಹ ಯೋಜನೆಗಳಿಂದ ಉಂಟಾಗಿದೆ. ಇದರ ವಿರುದ್ಧ ಬಂಡೆದ್ದ ರೈತರಿಗೆ ಬಂದೂಕಿನಿಂದ ಉತ್ತರಿಸಲಾಗುತ್ತಿದೆ. ಪಶ್ಚಿಮ ಬಂಗಾಳದ ನಂದಿಗ್ರಾಮದಲ್ಲಿ ನಡೆದದ್ದೆ ಇದು. ರೈತರನ್ನು ಶಾಶ್ವತ ಗುಲಾಮಗಿರಿಗೆ ನೂಕಲಾಗುತ್ತಿದೆ. ಇದರಿಂದ ಕೊನೆಯಲ್ಲಿ ಉಳಿಯುವುದು ಎರಡು; ಒಂದು ಇಡೀ ದೇಶದ ಆಸ್ತಿಗೆ ಒಡೆಯರಾಗಿರುವ ಸಣ್ಣ ಗುಂಪು ಮತ್ತು ಅವರ ಕೆಲಸದಾಳುಗಳ ಶತಕೋಟಿಗೂ ಮೀರಿದ ಗುಂಪು. ಇನ್ನು ಎಷ್ಟು ಹೆಣಗಾಡಿದರೂ ಆ ಗುಂಪು ಅಲ್ಲಿಂದ ಮೇಲೇಳಲು ಸಾಧ್ಯವೇ ಇಲ್ಲ.

ಕುವೆಂಪು ಈ ಆತಂಕವನ್ನು ಆಗಲೇ ಮನಗಂಡಿದ್ದರು. ಅದನ್ನು 'ಬೆರಳ್ ಗೆ ಕೊರಳ್' ನಾಟಕದಲ್ಲಿ ಈ ಅಂಶವನ್ನು ನಾವು ಗಮನಿಸಬಹುದು. ಅರ್ಜುನ, ಏಕಲವ್ಯ ಮುಖಾಮುಖಿಯಾದಾಗ ಅರ್ಜುನ ಏಕಲವ್ಯನಿಗೆ "ನಾವು ಆಳುವವರು ನೀನು ಆಳು" ಎಂದು ಹೇಳುತ್ತಾನೆ. ಅರ್ಜುನನ ಮನೋಧರ್ಮದಲ್ಲಿ ಕಾಡು, ನಾಡು ಎಲ್ಲವೂ ಅವನವೇ. ಅದೇ ರೀತಿಯಲ್ಲಿ ಇಂದು ಎಲ್ಲವೂ ಕೆಲವರವೇ ಆಗುವ ಆತಂಕ ಎದುರಾಗಿದೆ. ದೇಶದ ಪ್ರಗತಿಯ ಹೆಸರಿನಲ್ಲಿ ರೈತರನ್ನು ಭೂಮಿರಹಿತರನ್ನಾಗಿ ಮಾಡುವುದು ಎಲ್ಲಿಯ ನ್ಯಾಯವೋ ತಿಳಿಯದು.

ರೈತರ ದಮನ ಈ ರೀತಿಯಲ್ಲಿ ಸಾಗಿದ್ದರೆ, ಇನ್ನು ಗಿರಿ ಜನರದು ಇನ್ನೊಂದು ದೃಷ್ಟಾಂತ. ಅಣೆಕಟ್ಟಿನ ಹೆಸರಿನಲ್ಲಿ, ರಾಷ್ಟ್ರೀಯ ಉದ್ಯಾನದ ಹೆಸರಿನಲ್ಲಿ ಗಿರಿಜನರನ್ನು ಕಾಡುಗಳಿಂದು ಹೊರದಬ್ಬುವ ಕಾರ್ಯ ಶುರುವಾಗಿದೆ. ಶತಮಾನಗಳಿಂದ ಕಾಡನ್ನೇ ತಮ್ಮ ಮನೆಯಾಗಿಸುಕೊಂಡು ಬದುಕುತ್ತಿರುವ ಈ ಗಿರಿಜನರನ್ನು ಬಲವಂತವಾಗಿ ಒಕ್ಕಲೆಬ್ಬಿಸುವ ಕೆಲಸ ಬರದಿಂದ ಸಾಗಿದೆ. ಇದೆಲ್ಲದರ ವಿರುದ್ಧ ಕೆಲವು ಬಿಸಿರಕ್ತದ ಯುವಕರು ಬಂದೂಕು ಹಿಡಿದು ನಕ್ಸಲರಾಗಿದ್ದಾರೆ. ನಕ್ಸಲ್ ಮತ್ತು ಪೋಲೀಸರ ನಡುವಿನ ಹೊಡೆದಾಟದಲ್ಲಿ ಅಮಾಯಕ ಜನ ಬಲಿಯಾಗುತ್ತಿದ್ದಾರೆ. ಮತ್ತೊಂದೆಡೆ ವಿದ್ಯಾವಂತ ಯುವಕರು ನಕ್ಸಲ್ ಚಳುವಳಿಗೆ ಸೇರಿ ನಾಶವಾಗುತ್ತಿದ್ದಾರೆ. ಕಾಡಿನಿಂದ ಒಮ್ಮೆಲೆ ಹೊದಬ್ಬಲಾದ ಗಿರಿಜನರು ಸಮರ್ಪಕ ಪುನರ್ವಸತಿಯ ಕೊರತೆಯಿಂದಾಗಿ ಬೀದಿಪಾಲಾಗಿದ್ದಾರೆ. ಅದೇ ಕಾಡನ್ನು ಅಕ್ರಮ ಗಣಿಗಾರಿಕೆಗೆ ಹಸ್ತಾಂತರವಾಗಿ ಕೇವಲ ಕೆಲವರ ಬೊಕ್ಕಸ ತುಂಬುತ್ತಿದೆ.

ಇನ್ನು ಸರ್ಕಾರಗಳು ಶ್ರೀಮಂತರ ಬೇಕು ಬೇಡಗಳಿಗೆ ಅನುಸಾರವಾಗಿ ನಡೆಯುತ್ತಿವೆ. ಸರ್ಕಾರದ ನೀತಿಗಳ ಮೇಲೆ ಉದ್ಯಮಪತಿಗಳ ಪ್ರಭಾವ ಹೆಚ್ಚಾಗಿದೆ. ಬಜೆಟ್‌ಗಳೂ ಅವರ ಅನುಮತಿಯಿಂದಲೇ ಮಂಡಿತವಾಗಬೇಕಾಗಿದೆ. ಏಕೆಂದರೆ ಅವರ ಹಣಬಲ ಎಲ್ಲವನ್ನೂ ತನ್ನ ಹಿಡಿತಕ್ಕೆ ತೆಗೆದುಕೊಳ್ಳಲು ಸಮರ್ಥವಾಗಿದೆ. ಸರ್ಕಾರಗಳು ಅಳಿಯುವುದು ಉಳಿಯುವುದು ಸಹ ಅವರ ಇಚ್ಛಾನುಸಾರವಾಗುತ್ತಿದೆ. ಇದೆಲ್ಲಕ್ಕೆ

ಮುಖ್ಯ ಕಾರಣ ಜನಪ್ರತಿನಿಧಿಗಳು ಚುನಾವಣೆ ಸಂದರ್ಭದಲ್ಲಿ ಉದ್ಯಮಿಗಳಿಂದ ಪಡೆಯುವ ಹಣದಿಂದಾಗಿ. ಅವರಿಂದ ಹಣ ಪಡೆದು ಗೆದ್ದು ಬಂದ ಮೇಲೆ ಅವರ ಬೇಕು ಬೇಡಗಳಿಗೆ ಸ್ಪಂದಿಸದೆ ರಾಜಕಾರಣಿಗಳಿಗೆ ಬೇರೆ ದಾರಿಯಿಲ್ಲ. ಆದರೆ ಇದೆಲ್ಲದರಿಂದ ವರ್ಗ ತಾರತಮ್ಯ ಎಲ್ಲೆಡೆ ಆವರಿಸಿದೆ. ಬೂದಿ ಮುಚ್ಚಿದ ಕೆಂಡದಂತಿರುವ ಈ ಸ್ಥಿತಿ ಎಂದು ಸ್ಫೋಟಗೊಳ್ಳುತ್ತದೋ ಹೇಳಲಾಗದು. ಬಹುಶ: ಕುವೆಂಪು ಅವರ ಕವನ ''ಕಲ್ಕಿ''ಯ ಘಟನೆ ಸಂಭವಿಸಿದರೂ ಸಂಭವಿಸೀತು.

ವರ್ಗ ಸಂಘರ್ಷವನ್ನು ಮುಖ್ಯವಾಗಿ ಮೂರು ನೆಲೆಗಳಲ್ಲಿ ಗುರುತಿಸಬಹುದು.

ಅ. ಚಳುವಳಿಗಳು, ಹೋರಾಟಗಳು

ಆ. ಸಶಸ್ತ್ರ ಅಥವಾ ನಕ್ಸಲ್ ಹೋರಾಟ

ಇ. ಬೂದಿ ಮುಚ್ಚಿದ ಕೆಂಡದಂತೆ ಒಳಗೊಳಗೇ ಹೊಗೆಯಾಡುತ್ತಿರುವುದು.

## ಅ. ಚಳುವಳಿಗಳು, ಹೋರಾಟಗಳು

ಹಣ, ಆಸ್ತಿ ಒಂದೆಡೆ ಕ್ರೋಢೀಕರಿಸಿಕೊಂಡಿರುವುದರಿಂದ ಅದು ಸಮರ್ಪಕವಾಗಿ ಹಂಚಿಕೆಯಾಗಬೇಕೆಂಬ ಕೂಗು ಕೇಳಬರುತ್ತಿದೆ. ಹಳ್ಳಿಗಳಲ್ಲಿ ಜಮೀನು ಕೇವಲ ಕೆಲವೇ ಜಮೀನ್ದಾರರ ಹಿಡಿತದಲ್ಲಿದೆ. ಅದನ್ನು ರೈತರಿಗೆ ಹಂಚಬೇಕೆಂದು ಚಳುವಳಿಗಳು, ಹೋರಾಟಗಳು ನಿರಂತರವಾಗಿ ನಡೆದುಕೊಂಡು ಬರುತ್ತಿವೆ. ಇನ್ನೊಂದೆಡೆ ರೈತರ ಭೂಮಿಯನ್ನು ಅಭಿವೃದ್ಧಿಯ ಹೆಸರಿನಲ್ಲಿ ಒಬ್ಬರೇ ಲಪಟಾಯಿಸುವುದರ ವಿರುದ್ಧವೂ ಹೋರಾಟಗಳು ತೀವ್ರಗೊಂಡಿವೆ. ಈ ಸಂಘರ್ಷ ವಿರುವುದು ಬಡವರ ಮತ್ತು ಶ್ರೀಮಂತರ ನಡುವೆಯಾದರೂ ಶ್ರೀಮಂತರ ರಕ್ಷಣೆಗೆ ಸರ್ಕಾರಗಳು ನಿಲ್ಲಬೇಕಾದ ಒತ್ತಡಗಳಿವೆ. ಇದಕ್ಕೆ ಕಾರಣ ಸರ್ಕಾರದ ಮೇಲೆ ಶ್ರೀಮಂತರ ಹಿಡಿತ. ಇದರಿಂದ ಹೋರಾಟ ನಿರತರ ಮೇಲೆ ಗುಂಡುಗಳ ಮಳೆಗರೆಯಲಾಗುತ್ತಿದೆ. ಅವರ ಹೋರಾಟಗಳನ್ನು ಹತ್ತಿಕ್ಕಲು ಸರ್ವ ಪ್ರಯತ್ನಗಳು ನಡೆಯುತ್ತಿವೆ.

## ಆ. ಸಶಸ್ತ್ರ ಅಥವಾ ನಕ್ಸಲ್ ಹೋರಾಟ

ಸಮಾಜದಲ್ಲಿ ಅಸಮಾನತೆ, ಭ್ರಷ್ಟಾಚಾರ, ಶ್ರೀಮಂತರ ದಬ್ಬಾಳಿಕೆ, ಸರಕಾರಗಳ ದಮನಕಾರಕ ನೀತಿಗಳ ವಿರುದ್ಧ ಬಂಡೇಳಿರುವ ಕೆಲವರು ಹೋರಾಟಕ್ಕೆ ಬಂದೂಕಿನ ಮೊರೆಹೋಗಿದ್ದಾರೆ. ಅದರಿಂದ ಅವರ ಗುರಿ ನೇರವೇರುವುದು ಸಾಧ್ಯವಿಲ್ಲ, ಆದರೂ ಆಕ್ರೋಶಕದಲ್ಲಿ ಬಂದೂಕು ಹಿಡಿದಿದ್ದಾರೆ. ಶ್ರೀಮಂತರನ್ನು ಹೆದರಿಸುವ ಮೂಲಕ, ಸರ್ಕಾರವನ್ನು ಹೆದರಿಸುವ ಮೂಲಕ ಅವರ ಕಾರ್ಯ ಸಾಧನೆ ಸಾಧ್ಯ ಎಂಬುದು ಅವರ ನಂಬಿಕೆ. ಬಂದೂಕಿನಿಂದ ಬಡವರಿಗೆ ಗಿರಿಜನರಿಗೆ, ದಲಿತರಿಗೆ, ಮಹಿಳೆಯರಿಗೆ ನ್ಯಾಯ ದೊರಕಿಸಿಕೊಡಲು ಸಾಧ್ಯ

ಎಂಬುದು ಅವರ ನಿಲುವು. ಆದರೆ ಅಶಾಂತಿಯ ಮೂಲಕ ಯಾವ ಶಾಂತಿಯನ್ನೂ ಪಡೆಯಲಾಗದು ಅದನ್ನು ಅವರು ಮನಗಾಣಬೇಕು. ಅವರು ಬಂದೂಕನ್ನು ತ್ಯಜಿಸಿ ಸಮಾಜದ ಮುಖ್ಯವಾಹಿನಿಗೆ ಬರಬೇಕು. ಆದರೆ ಈ ನಿಟ್ಟಿನಲ್ಲಿ ಪ್ರಯತ್ನಗಳು ನಡೆದಿಲ್ಲವೆಂಬುದು ಮಾತ್ರ ಅಪಾಯಕಾರಿ ಸತ್ಯ. ಒಂದೆಡೆ ನಕ್ಸಲರು ಹತರಾದರೆ, ಇನ್ನೊಂದೆಡೆ ಪೋಲೀಸರು ಹತ್ಯೆಯಾಗುತ್ತಿದ್ದಾರೆ. ಜೊತೆಗೆ ಇವನ ನಡುವಿನ ಕಾಳಗದಲ್ಲಿ ಅಮಾಯಕ ಜನರು ಬಲಿಯಾಗುತ್ತಿರುವುದು ವಿಷಾದಕರ.

## ೩. ಬೂದಿ ಮುಚ್ಚಿದ ಕೆಂಡದಂತೆ ಒಳಗೊಳಗೇ ಹೊಗೆಯಾಡುತ್ತಿರುವುದು.

ಮೇಲಿನ ಎರಡು ಹೋರಾಟಗಳಲ್ಲಿ ಜನರ ಅಸಮಾಧಾನ ಹೊರಹೊಮ್ಮಿದ್ದರೆ, ಇಲ್ಲಿ ಅದು ತನ್ನ ಕೋಪವನ್ನು ಒಳಗೆ ಅದಿಮಿಟ್ಟುಕೊಂಡಿದೆ. ಈ ನಮ್ಮ ಸಮಾಜದಲ್ಲಿ ಶೇಕಡ ತೊಂಭತ್ತರಷ್ಟು ಜನರು ಅನುಸರಿಸುತ್ತಿರುವ ನೀತಿ ಇದು. ಆದರೆ ಇದು ಅತ್ಯಂತ ಅಪಾಯಕಾರಿ ನೀತಿ. ಏಕೆಂದರೆ ಎಷ್ಟೋ ವರ್ಷಗಳ ಕೋಪ ಒಮ್ಮೆಲೆ ಸ್ಫೋಟಗೊಂಡರೆ ಒಂದು ಇಡೀ ಜನಾಂಗವೇ ನಾಶವಾಗರುವ ಭೀತಿ ಇರುತ್ತದೆ. ರಕ್ತಸಿಕ್ತ ಕ್ರಾಂತಿಗೆ ಇದೇ ಮೂಲ ಲಕ್ಷಣ. ಪ್ರಾನ್ಸ್ ಮತ್ತು ರಷ್ಯಾ ಕ್ರಾಂತಿಗಳು ಈ ರೀತಿಯಲ್ಲೆ ಸ್ಫೋಟಗೊಂಡವು.

ಈ ಎಲ್ಲ ರೀತಿಯ ಚಳುವಳಿಗಳು, ಅಸಮಾಧಾನಗಳನ್ನು ಜನರಿಂದ ದೂರಮಾಡಲು ಸರಕಾರಗಳು ಮೊದಲು ಪಾರದರ್ಶಕವಾಗಬೇಕು. ಜನಪರ ಕಾಳಜಿಯನ್ನು ಬೆಳೆಸಿಕೊಳ್ಳಬೇಕು. ಆಸ್ತಿ, ಹಣ ಒಂದೇ ಕಡೆ ಕ್ರೂಢೀಕರಣಗೊಳ್ಳುವುದನ್ನು ನಿಯಂತ್ರಿಸಬೇಕು. ಸಾಮಾನ್ಯ ಜನರ ಸಮಸ್ಯೆಗಳಿಗೆ ಸೂಕ್ತ ರೀತಿಯಲ್ಲಿ ಸ್ಪಂದಿಸಬೇಕು. ಅಂತರ ರಾಷ್ಟ್ರೀಯ ಒತ್ತಡಗಳಿಗೆ ಮಣಿದು ರೈತರನ್ನು ಗಿರಿಜನರನ್ನು ಒಕ್ಕಲೆಬ್ಬಿಸುವ ಕೆಲಸವನ್ನು ಕೈಬಿಡಬೇಕು. ಶ್ರೀಮಂತರ ಹಿಡಿತದಲ್ಲಿರದೆ ಪ್ರಜಾಸತ್ತಾತ್ಮಕ ರೀತಿಯಲ್ಲಿ ಸರಕಾರವನ್ನು ನಡೆಸಿಕೊಂಡು ಹೋಗಬೇಕು. ಆಗ ಮಾತ್ರ ನಾಡು ಶಾಂತಿಯಿಂದ, ನೆಮ್ಮದಿಯಿಂದ ಇರಲು ಸಾಧ್ಯ.

ಕುವೆಂಪು ತಮ್ಮ ಸಾಹಿತ್ಯದ ಮೂಲಕ ಪ್ರತಿಪಾದಿಸಿದ ಮೌಲ್ಯಗಳ ಮೂಲಕ ಸಮಾಜದಲ್ಲಿ ಸಮಾನತೆ, ಸಹಬಾಳ್ವೆಗಳನ್ನು ರೂಢಿಸಿಕೊಳ್ಳಬೇಕು. ಅವರ ಚಿಂತನೆಗಳು ಸಾರ್ವಕಾಲಿಕ ಮೌಲ್ಯಗಳನ್ನೊಳಗೊಂಡವು. ಅವರು ಅಂದಿನ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿ ಕನ್ನಡ ಸಾಹಿತ್ಯ ಇನ್ನಾವತ್ತಿಗೂ ಬರುವ ಲೇಖಕರಿಗೆ ಮಾರ್ಗದರ್ಶನ ನೀಡುವಂಹದು. ಅವರು ಅವರ ಕಾಲದ ತಲ್ಲಣಗಳಿಗೆ ಪ್ರತಿಕ್ರಿಯಿಸುವುದರ ಜೊತೆಗೆ ಮುಂದಿನ ದಿನಗಳಲ್ಲಿ ಎದುರುರಾಗಬಹುದಾದ ಸಮಸ್ಯೆಗಳಿಗೂ ಸಮಾಧಾನವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಮೇಲೆ ವಿವರಿಸಲಾದ ಎಲ್ಲ ಸಮಸ್ಯೆಗಳಿಗೂ ಅವರು ಅಂದಿನ ದಿನಗಳಲ್ಲೇ ಮುಖಾಮುಖಿಯಾಗುವ ಬಗೆ ಅದ್ಭುತ. ಅವರ ಆದರ್ಶ ರಾಮ, ಏಕಲವ್ಯ, ಜಲಗಾರರ ಮೂಲಕ ಸಮಾಜ ನಡೆಯಬೇಕಾದ ದಾರಿಯನ್ನು ಸೂಚಿಸಿದ್ದಾರೆ. ಜಾತಿ ಪದ್ಧತಿ, ವರ್ಗ ಸಂಘರ್ಷಗಳ ಬಗ್ಗೆ ಅವರಿಗಿದ್ದ ಸಿಟ್ಟು ಅವರನ್ನೆಂದೂ ತಾಳ್ಮೆಗೆಡುವಂತೆ ಮಾಡಲಿಲ್ಲ. ಬದಲಾಗಿ

ಅದನ್ನು ಸೂಕ್ತ ರೀತಿಯಲ್ಲಿ ಹೊರಗೆಡಹಿದರು. ಆದರೆ ಇಂದಿನ ಸಾಹಿತ್ಯ ವಲಯ ಸಾಹಿತ್ಯವನ್ನು ಒಂದು ಅಸ್ತ್ರವಾಗಿ ಬಳಸಿಕೊಳ್ಳುತ್ತಿದೆ. ಅಲ್ಲದೆ ಒಬ್ಬರ ಮೇಲೆ ಒಬ್ಬರು ಕೆಸರೆರಚಾಟದಲ್ಲಿ ತೊಡಗಿದ್ದಾರೆ. 'ಅನುದೇವಾ. . . .' ಮುಟ್ಟುಗೋಲಿಗೆ ಒಳಗಾಗದರೆ, 'ಆವರಣ' ತನ್ನ ಕೇಸರೀಕರಣದಿಂದ ಅಪಖ್ಯಾತಿಗೆ ಒಳಗಾಗಿದೆ. ಆದರೆ ಕುವೆಂಪು ಸಾಹಿತ್ಯ ಎಂದೂ ಬೇರೆಯವರ ಭಾವನೆಗಳನ್ನು ವಿನಾಕಾರಣ ಕೆದಕಲಿಲ್ಲ. ಅದರಲ್ಲೂ ಅವರ ನಾಟಕಗಳು ಅದೆಷ್ಟೋ ಟೀಕೆಗಳಿಗೆ ಗುರಿಯಾದರೂ ಅವುಗಳನ್ನು ಸಾರಾಸಗಟಾಗಿ ನಿರಾಕರಿಸಲು ಸಾಧ್ಯವಾಗಿಲ್ಲ. ಅದೇ ಅವರ ಸಾಹಿತ್ಯದ ಹಿರಿಮೆ.

# ಆಕರ ಕೃತಿಗಳು


೧. ಕುವೆಂಪು : ೨೦೦೪, ಕುವೆಂಪು ಸಮಗ್ರ ಗದ್ಯ - ೨, ಸಂ. ಶಿವಾರೆಡ್ಡಿ, ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೯೫೫

೨. -ಅದೇ-ಪುಟ - ೯೦೬

೩. ಕುವೆಂಪು : ೨೦೦೪, ಕುವೆಂಪು ಸಮಗ್ರ ನಾಟಕ, ಸಂ. ಶಿವಾರೆಡ್ಡಿ, ಕೆ.ಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ - ೧೩

೪. -ಅದೇ-ಪುಟ - ೧೪

೫. -ಅದೇ-ಪುಟ - ೧೫

೬. -ಅದೇ-

೭. -ಅದೇ-ಪುಟ - ೧೨

೮. -ಅದೇ-ಪುಟ - ೧೫

೯. -ಅದೇ-ಪುಟ - ೬,೭

೧೦. -ಅದೇ-ಪುಟ - ೮

೧೧. ರಾಮ ಮನೋಹರ ಲೋಹಿಯಾ : ೧೯೯೭, ಸ್ವಾತಂತ್ರ್ಯದ ಅಂತರ್ಜಲ, ರಾಮಮನೋಹರ ಲೋಹಿಯಾ ಬರಹಗಳು (ಸಂಪುಟ - ಒಂದು), ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ - ೧೨೩.

# ಉಪಸಂಹಾರ

ಕುವೆಂಪು ಕನ್ನಡ ಸಾಹಿತ್ಯ ಕಂಡ ಅಪ್ರತಿಮ ಲೇಖಕ. ಅವರ ಸಾಹಿತ್ಯದ ಎಲ್ಲಾ ಪ್ರಕಾರಗಳೂ ಸಮಾಜಮುಖಿ ಚಿಂತನೆಗಳಿಂದ ಹೊರತಾಗಿಲ್ಲ. ಅದೇ ರೀತಿ ಅವರ ನಾಟಕಗಳೂ ಸಹ. ಶೂದ್ರರು ಅಕ್ಷರ ಕಲಿಯುವುದೇ ಪಾಪ ಎಂದಿದ್ದ ದಿನಗಳಲ್ಲಿ ಅವರು ತಮ್ಮ ಸಾಹಿತ್ಯ ಕೃಷಿ ಆರಂಭಿಸುತ್ತಾರೆ. ಅವರು ಲೇಖನಿ ಹಿಡಿದದ್ದೇ ಒಂದು ಪ್ರತಿರೋಧ. ಇನ್ನು ಅವರು ಬರೆದದ್ದಂತೂ ಅದಕ್ಕೆ ಪೂರಕವಾಗಿಯೆ ಇತ್ತು.

"ಕುವೆಂಪು ಅವರ ನಾಟಕಗಳು ಪ್ರಧಾನವಾಗಿ ಅಪಮಾನಿತ ಮತ್ತು ಅಸಹಾಯಕ ಜನವರ್ಗಗಳಿಗೆ ಮನುಷ್ಯ ಸಹಜ ಹಕ್ಕುಗಳು ದಕ್ಕಬೇಕಾಗಿರುವ ಅವರ ಪ್ರತಿಭೆಗಳು ಅಡೆತಡೆಯಿಲ್ಲದೆ ಅರಳಬೇಕದ ಆವಶ್ಯಕತೆಯನ್ನು ವಿವರಿಸುತ್ತವೆ."[೧] ಅವರ ನಾಟಕಗಳು ಸಾಮಾನ್ಯನ ಹಕ್ಕುಗಳಿಗಾಗಿ ಹೋರಾಡುತ್ತವೆ. ವರ್ಣ ವ್ಯವಸ್ಥೆಯಿಂದ ತತ್ತರಿಸಿ ಹೋಗಿರುವ ಸಮಾಜವನ್ನು ಮಾನವ ಕೇಂದ್ರಿತ ನೆಲೆಯಲ್ಲಿ ಪುನರುಜ್ಜೀವನಗೊಳಿಸುವ ಪ್ರಯತ್ನ ಮಾಡುತ್ತವೆ. ಅವರ ನಾಟಕಗಳು ಕೇವಲ ಪುರೋಹಿತ ವರ್ಗದ ವಿರುದ್ಧ ಧ್ವನಿ ಮಾತ್ರವಾಗಿರದೆ ಆದರ್ಶ ಸಮಾಜದ ಕಡೆಗೆ ಮನುಷ್ಯನನ್ನು ಕೊಂಡೊಯ್ಯುವ ಪ್ರಯತ್ನ ಮಾಡುತ್ತವೆ. ಬಿ.ಎ.ವಿವೇಕ ರೈ ಅವರ ಪ್ರಕಾರ "ಕುವೆಂಪು ಅವರ ಬಹುತೇಕ ನಾಟಕಗಳು ಸ್ಥಾಪಿತ ವ್ಯವಸ್ಥೆಗೆ ಪ್ರತಿರೋಧ ತೋರಿಸುವುದನ್ನಷ್ಟೇ ಮಾಡದೆ ಪರ್ಯಾಯ ಸಂಸ್ಕೃತಿಯನ್ನು ಸೂಚಿಸುವುದು ಮತ್ತು ಸ್ಥಾಪಿಸುವುದು ಧನಾತ್ಮಕ ಅಂಶ."[೨]

ಸಾಮಾನ್ಯವಾಗಿ ಭಾರತೀಯರು ಸ್ಥಾಪಿತ ವ್ಯವಸ್ಥೆಯನ್ನು ಪ್ರಶ್ನಿಸುವ ಗೋಜಿಗೆ ಹೋಗುವುದಿಲ್ಲ. ಲೋಹಿಯಾ ಹೇಳುವಂತೆ "ಭಾರತೀಯರು ಬದುಕಿಗೆ ಹೇಗೆ ಜೋತು ಬಿದ್ದಿದ್ದಾರೆಂದರೆ, ಅವರು ಕಡುದುಃಖದ ಮಡುವಿನಲ್ಲೇ ನರಳಿ ಹೇಗೋ ಬದುಕು ನೂಕ ಬಯಸುವರೇ ವಿನಃ ಏನಾದರೊಂದು ಮಹತ್ವದ ಪ್ರಯತ್ನ ಮಾಡುವ ಸಾಹಸಕ್ಕಿಳಿದವರಲ್ಲ. ಆದರೆ ಹಣ ಹಾಗೂ ಅಧಿಕಾರ ಕುರಿತ ದುರಾಸೆಯಲ್ಲಿ ಮಾತ್ರ ಜಗತ್ತಿನ ಯಾವ ಜನಾಂಗವೂ ಅವರನ್ನು ಮೀರಿಸಲಾರರು."[೩]

ಆದರೆ ಕುವೆಂಪು ಈ ಮನೋಧರ್ಮಕ್ಕೆ ಸೇರಿದವರಲ್ಲ. ಅದಕ್ಕೆ ನಿದರ್ಶನವೆಂದರೆ ಅವರ 'ಶೂದ್ರತಪಸ್ವಿ' ನಾಟಕ. ಉತ್ತರ ರಾಮಾಯಣದಲ್ಲಿ ಬರುವ ಅದೇ ಪ್ರಸಂಗವನ್ನು ಹಲವರು ನಿರೂಪಿಸಿದ್ದಾರೆ.

೧. ಭವಭೂತಿಯ ಉತ್ತರರಾಮಾಯಣ

೨. ನಾಗಚಂದ್ರನ ರಾಮಾಯಣ

೩. ತೊರವೆ ರಾಮಾಯಣ

೪. ಕುಮುದೇಂದು ರಾಮಾಯಣ

೫. ಅಳಸಿಂಗಾಚಾರ್ಯರ ಉತ್ತರಕಾಂಡ

೬. ತಿರುಮಲೆ ವೈದ್ಯರ ಉತ್ತರಕಾಂಡ

೭. ನಾರಾಯಣ ಪಂಡಿತಾಚಾರ್ಯರ ಶ್ರೀಮದ್ಸಂಗ್ರಹ ರಾಮಾಯಣ

ಮಾಡಲ್ಪಟ್ಟು ಸಮಾಜಕ್ಕೆ ನಿಷ್ಪ್ರಯೋಜಕವಾಗುತ್ತವೆ. ಪ್ರಸ್ತುತ ಸಂದರ್ಭದಲ್ಲಿ ವರ್ಣ ವರ್ಗ ಸಂಘರ್ಷ ತನ್ನ ಅತಿ ಎತ್ತರದ ಮಟ್ಟವನ್ನು ತಲುಪಿದೆ. ಕೋಮುವಾದಿಗಳು ಅಧಿಕಾರಕ್ಕೆ ಬರುತ್ತಿದ್ದಾರೆ. ಈ ನೆಲೆಯಲ್ಲಿ ಕುವೆಂಪುರವರ ನಾಟಕಗಳನ್ನು ಪರಿಶೀಲಿಸಲಾಗಿದೆ. ಏಕೆಂದರೆ ಕುವೆಂಪು ಅವರ ನಾಟಕಗಳು ತಮ್ಮ ಸಾರ್ವಕಾಲಿಕ ಮೌಲ್ಯಗಳಿಂದ ಕೂಡಿವೆ. ಅವರ ನಾಟಕಗಳಲ್ಲಿ ಚರ್ಚಿತವಾಗಿರುವ ಅಂಶಗಳು ಇಂದಿಗೂ ಪ್ರಸ್ತುತ.

ಕುವೆಂಪು ನಾಟಕಗಳ ಬಗ್ಗೆ ಪಲವರು ಹಲವು ಬಗೆಯ ಮಿತಿಗಳನ್ನು ಗುರುತಿಸಬಹುದು. ಆದರೆ ಅವರ ಅಂದಿನ ಸಾಮಾಜಿಕ ಹಿನ್ನಲೆಯನ್ನು ಗಮನಿಸಿದಾಗ ಅವರ ಸಾಧನೆ ಅತಿ ಎತ್ತರದಲ್ಲಿ ನಿಲ್ಲುತ್ತದೆ. ಇನ್ನು ಕನ್ನಡದಲ್ಲಿ ನಾಟಕಗಳ ಬಗ್ಗೆ ಅಷ್ಟಾಗಿ ಅಧ್ಯಯನಗಳು ನಡೆದಿಲ್ಲ. ನಡೆದಿದ್ದರೂ ಅವು ಸಮಗ್ರವಾಗಿರದೆ ಕೆಲವು ಭಾಗಗಳಾಗಿ ಮಾತ್ರ ಮೂಡಿಬಂದಿವೆ. ಪ್ರಸ್ತುತ ಅಧ್ಯಯನದಲ್ಲಿ ಕುವೆಂಪು ಅವರ ಜಲಗಾರ, ಶೂದ್ರತಪಸ್ವಿ ಮತ್ತು ಬೆರಳ್ ಗೆ ಕೊರಳ್ ನಾಟಕಗಳನ್ನು ಮಾತ್ರ ಪರಿಶೀಲಿಸಲಾಗಿದೆ. ಇದೇ ನಿಟ್ಟಿನಲ್ಲಿ ಅವರ ಸಮಗ್ರ ನಾಟಕಗಳ ಅಧ್ಯಯನದ ಅವಶ್ಯಕತೆ ಕಂಡುಬರುತ್ತದೆ. ಮತ್ತು ವರ್ಣ ವರ್ಗ ಸಂಘರ್ಷದ ನೆಲೆಯಲ್ಲಿಯೇ ಇಡೀ ಕನ್ನಡ ನಾಟಕ ಸಾಹಿತ್ಯವನ್ನು ನೋಡಬೇಕಾದ ಅವಶ್ಯಕತೆಯೂ ಇದೆ.

ಯಾವ ಕ್ಷೇತ್ರದಲ್ಲಿ ಏನೇ ಹೋರಾಟಗಳು ನಡೆದರೂ ಜಾತಿ ಪದ್ಧತಿಯಂತಹ ಅನಿಷ್ಟಗಳು ಅಷ್ಟು ಸುಲಭದಲ್ಲಿ ನಾಶವಾಗುವಂತಹದಲ್ಲ. ಆದರೂ ಪ್ರಯತ್ನಗಳು ಮುಂದುವರಿಯಬೇಕು. ಲೋಹಿಯಾ ಗುರುತಿಸಿರುವಂತೆ "ಈ ತನಕ ಆಗಿರುವ ಸುಧಾರಣಾವಾದಿ ಆಂದೋಲನಗಳೆಲ್ಲವನ್ನೂ ಸನಾತನ ಹಿಂದೂ ವ್ಯವಸ್ಥೆ ಆಪೋಶನ ತೆಗೆದುಕೊಂಡಿದೆ. ಹಾಗೂ ಜಾತೀವಾದದ ಭಯಂಕರ ರೂಪ ಈಗಲೂ ಉಳಿದು ನಿಂತಿದೆ. ಇದು ಕೊಳೆತು ಎಷ್ಟೊಂದು ಆಳಕ್ಕೆ ಇಳಿದಿದೆಯೆಂದರೆ, ಇದರ ಮೇಲೆ ದೊಡ್ಡ ಕಲ್ಲನ್ನು ಹಾಕಿದರೂ ಅದು ಈ ಕೊಳೆ ಕೆಸರಿನ ಗರ್ಭದಲ್ಲಿಳಿದು ಎಲ್ಲಿಗೆ ಹೋಗುತ್ತದೆಂದು ತಿಳಿಯುವುದೇ ಇಲ್ಲ. ಎಲ್ಲಿಯ ತನಕ ಈ ಆಳದಲ್ಲಿನ ಕೊಳೆ ಕೆಸರಿನಲ್ಲಿ ಒಣಗಿ ಶುದ್ಧವಾಗುವುದಿಲ್ಲವೋ ಅಲ್ಲಿಯ ತನಕ ಭಾರತದಲ್ಲಿ ಜಾತಿ ಪದ್ಧತಿ ನಾಶವಾಗುವುದಿಲ್ಲ."[4] ಇದಕ್ಕಾಗಿ ನಿರಂತರ ಹೋರಾಟ ಅವಶ್ಯ. ಇದರ ಜೊತೆಗೆ ರಾಜಕೀಯ ಇಚ್ಛಾಶಕ್ತಿ ಮತ್ತು ಮಾನವನ ಸ್ವಪ್ರಯತ್ನವೂ ಬೇಕಾಗಿದೆ.

"ಸಮನ್ವಯ ದೃಷ್ಟಿಯ ಸೆಕ್ಯೂಲರ್ ಅಥವಾ ಸಾರ್ವಲೌಕಿಕ ಕ್ಷೇಮರಾಷ್ಟ್ರ ಎಂದು ಘೋಷಿತವಾಗಿದೆ, ನಮ್ಮ ಭಾರತ. ಆದ್ದರಿಂದ ಆ ಘೋಷಣೆ ಕಾರ್ಯಕಾರಿಯಾಗಿ ಸಫಲವಾಗಬೇಕಾದರೆ ನಮ್ಮ ಶ್ರೀಸಾಮಾನ್ಯರಲ್ಲಿ ಮತದ ಮೌಢ್ಯತೆಗಳು ಮಾತ್ರವಲ್ಲದೆ, ಮತಭಾವದ ಮೌಢ್ಯತೆಯೂ ತೊಲಗಬೇಕು. ವರ್ಣಾಶ್ರಮ, ಜಾತಿ ಪದ್ಧತಿ ಮೇಲುಕೀಳು ಭಾವನೆ ಮುಂತಾದ ಮಧ್ಯಯುಗದ ಕ್ರೂರ ಕರಾಳ ತತ್ವಗಳೆಲ್ಲ ವೈಜ್ಞಾನಿಕ ದೃಷ್ಟಿಯ ಅಗ್ನಿಕುಂಡದಲ್ಲಿ ಭಸ್ಮೀಕೃತವಾಗಬೇಕು. ಮತ್ತು ರಾಜಕೀಯಗಳ ಅಂಧಕಾರವು ವಿಜ್ಞಾನ ಮತ್ತು ಆಧ್ಯಾತ್ಮಗಳ ಸೂರ್ಯೋದಯಕ್ಕೆ ಶರಣಾಗಿ, ತೊಲಗಿ, ಸರ್ವೋದಯದ ಕಾಂತಿ ಹಬ್ಬಿ, ಶಾಂತಿ ಮೈದೋರಲಿ ಎಂಬ ಅಭೀಪ್ಸೆ ಸರ್ವರ ಹೃದಯದ

ಪ್ರಾರ್ಥನೆಯಾಗಿ, ಅತೀತ ಕಲ್ಯಾಣ ಶಕ್ತಿಗಳ ಅವತರಣಕ್ಕೆ ಹಾದಿಯಾಗಲಿಯೆಂದು ಹಾರೈಸುತ್ತೇವೆ."[೬]
ಈ ಅಧ್ಯಯನದ ಆಶಯ, ಅವಶ್ಯಕತೆಯನ್ನು ಮೇಲಿನ ಕುವೆಂಪು ಅವರ ಮಾತುಗಳಿಂದ ಗ್ರಹಿಸಬಹುದು.

## ಆಕರ ಕೃತಿಗಳು


೧. ಕಾಳೇಗೌಡ ನಾಗವಾರ : ೨೦೦೫, ಅನಿಕೇತನ, ಸಂ: ಮರುಳಯ್ಯ ಸಾ.ಶಿ, ಸಪ್ನ ಬುಕ್ ಹೌಸ್, ಬೆಂಗಳೂರು, ಪುಟ-೯೩೯,

೨. ವಿವೇಕ ರೈ ಬಿ.ಎ. : ೨೦೦೪, ಕುವೆಂಪು ಸಮಗ್ರ ನಾಟಕ, ಸಂ:ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಮುನ್ನುಡಿ.

೩. ರಾಮಮನೋಹರ ಲೋಹಿಯಾ : ೧೯೯೬, ಸ್ವಾತಂತ್ರ್ಯದ ಅಂತರ್ಜಲ, ರಾಮಮನೋಹರ ಲೋಹಿಯಾ, ಬರಹಗಳು (ಸಂಪುಟ-ಒಂದು), ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ-೧೨೦

೪. ರಾಮಮನೋಹರ ಲೋಹಿಯಾ : ೧೯೯೯, ಕಣ್ಣೆದುರಿನ ಪ್ರಶ್ನೆಗಳು, ರಾಮಮನೋಹರ ಲೋಹಿಯಾ, ಬರಹಗಳು (ಸಂಪುಟ-ಐದು) ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ಪುಟ-೬

೫. ರಾಮಮನೋಹರ ಲೋಹಿಯಾ : ೧೯೯೮, ಉತ್ತರ ದಕ್ಷಿಣ, ರಾಮಮನೋಹರ ಲೋಹಿಯಾ ಬರಹಗಳು (ಸಂಪುಟ-ಎರಡು), ಸಂ. ನಟರಾಜ್ ಹುಳಿಯಾರ್ ಮತ್ತು ಕಾಳೇಗೌಡ ನಾಗವಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ-೧೩೭

೬. ಕುವೆಂಪು : ೨೦೦೪, ಕುವೆಂಪು ಸಮಗ್ರ ಗದ್ಯ - ೨, ಸಂ. :ಶಿವಾರೆಡ್ಡಿ ಕೆ.ಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ -೫೨೭

# ಆಕರ ಕೃತಿಗಳು

೧.ಅನಿಕೇತನ : ೨೦೦೫ : ಸಂ. ಮರುಳಯ್ಯ ಸಾ.ಶಿ,
ಸಪ್ನ ಬುಕ್ ಹೌಸ್,
ಬೆಂಗಳೂರು

೨. ಆಯ್ದ ಕುವೆಂಪು ಕವನಗಳು : (ತಿಳಿಸಿಲ್ಲ) : ಸಂ. ಸಿ.ಪಿ.ಕೆ,
ಚೇತನ ಬುಕ್ ಹೌಸ್,
ಮೈಸೂರು

೩. ಉತ್ತರ ದಕ್ಷಿಣ : ೧೯೯೮ : ಸಂ. ನಟರಾಜ್ ಹುಳಿಯಾರ್ ಮತ್ತು
ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಎರಡು) ಕಾಳೇಗೌಡ ನಾಗವಾರ,
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,
ಬೆಂಗಳೂರು

೪. ಕುವೆಂಪು ಸಮಗ್ರ ಗದ್ಯ - ೨ : ೨೦೦೪ : ಸಂ. ಶಿವಾರೆಡ್ಡಿ ಕೆ.ಸಿ.
ಕನ್ನಡ ವಿಶ್ವವಿದ್ಯಾಲಯ,
ಹಂಪಿ

೫. ಕುವೆಂಪು ಸಮಗ್ರ ನಾಟಕ : ೨೦೦೪ : ಸಂ. ಶಿವಾರೆಡ್ಡಿ ಕೆ.ಸಿ.
ಕನ್ನಡ ವಿಶ್ವವಿದ್ಯಾಲಯ,
ಹಂಪಿ

೬. ದಲಿತ ಕಥನ : ೨೦೦೬ : ಮೊಗಳ್ಳಿ ಗಣೇಶ್,
ಕನ್ನಡ ವಿಶ್ವವಿದ್ಯಾಲಯ,
ಹಂಪಿ

೭. ಭಾಷೆ ಮತ್ತು ಇತಿಹಾಸ : ೧೯೯೬

ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಮೂರು),

: ಸಂ. ನಟರಾಜ್ ಹುಳಿಯಾರ್ ಮತ್ತು

ಕಾಳೇಗೌಡ ನಾಗವಾರ,

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,

ಬೆಂಗಳೂರು.

೮.. ಮನುಸ್ಮೃತಿ : ೧೯೯೬ (ಮೂರನೆ ಮುದ್ರಣ)

:ಅನು: ಚಕ್ರಕೋಡಿ ಈಶ್ವರಶಾಸ್ತ್ರೀ,

ಸಮಾಜ ಪುಸ್ತಕಾಲಯ,

ಧಾರವಾಡ

೯. ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ : ೨೦೦೩ (ಮೂರನೆ ಮುದ್ರಣ): ಸ್ವಾಮಿ ಧರ್ಮತೀರ್ಥ

ಅನು: ಭಗವಾನ್,

ಮಹಿಮ ಪ್ರಕಾಶನ,

ಮೈಸೂರು

೧೦. ಶ್ರೀಕುವೆಂಪು : ೨೦೦೩(ಮೂರನೆ ಮುದ್ರಣ)

: ಸಂ. ಜಿ. ಎಸ್. ಶಿವರುದ್ರಪ್ಪ,

ಬೆಂಗಳೂರು ವಿಶ್ವವಿದ್ಯಾಲಯ,

ಬೆಂಗಳೂರು

೧೧. ಸ್ವಾತಂತ್ರ್ಯದ ಅಂತರ್ಜಲ : ೧೯೯೬

ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಒಂದು)

: ಸಂ. ನಟರಾಜ್ ಹುಳಿಯಾರ್ ಮತ್ತು

ಕಾಳೇಗೌಡ ನಾಗವಾರ,

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,

ಬೆಂಗಳೂರು

# ಪರಾಮರ್ಶನ ಗ್ರಂಥಗಳು


೧. ಕನ್ನಡದ ಹಾಡು - ಪಾಡು : ೨೦೦೩ : ಶಿವಾರೆಡ್ಡಿ ಕೆ.ಸಿ.,
ಅಧ್ಯಯನ ಮಂಡಲ,
ಬೆಂಗಳೂರು

೨. ಕುವೆಂಪು ನಾಟಕಗಳ ಅಧ್ಯಯನ : ೨೦೦೩ : ನರಹಳ್ಳಿ ಬಾಲಸುಬ್ರಮಣ್ಯ
ಅಂಕಿತ ಪುಸ್ತಕ,
ಬೆಂಗಳೂರು

೩. ಕುವೆಂಪು ಸಮಗ್ರ ಗದ್ಯ - ೧ : ೨೦೦೩ : ಸಂ. ಶಿವಾರೆಡ್ಡಿ ಕೆ.ಸಿ.
ಕನ್ನಡ ವಿಶ್ವವಿದ್ಯಾಲಯ,
ಹಂಪಿ

೪. ಮಾರ್ಕ್ಸ್, ಗಾಂಧಿ, ಸಮಾಜವಾದ : ೨೦೦೩ : ಸಂ. ನಟರಾಜ್ ಹುಳಿಯಾರ್
(ರಾಮಮನೋಹರ ಲೋಹಿಯ ಬರಹಗಳು (ಸಂಪುಟ-ಎರಡು) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,
ಬೆಂಗಳೂರು

೫.. ರಸಋಷಿ ಕುವೆಂಪು : ೧೯೯೬ : ಪರಮೇಶ್ವರ ಭಟ್ಟ ಎಸ್. ವಿ,
ಮೈಸೂರು ವಿಶ್ವವಿದ್ಯಾಲಯ,
ಮೈಸೂರು

